# ಯಲ್ಲಮ್ಮನ ಕಥನ ಕಾವ್ಯಗಳ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)

ನೋ.ಸಂ.೧೫೦೧೦೧೦೩೦೦೯




ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩೨೭೬



೨೦೧೬



1251 B

# ಯಲ್ಲಮ್ಮನ ಕಥನ ಕಾವ್ಯಗಳ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ,ಹಂಪಿ.

ನೋ.ಸಂ : ೧೫೦೧೦೧೦೩೦೦೦೯



ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩–೨೭೬

೨೦೧೬

# ಪರಿವಿಡಿ

# ಅಧ್ಯಾಯ : ಒಂದು
# ಅಧ್ಯಯನದ ಉದ್ದೇಶ, ವ್ಯಾಪ್ತಿ ಮಹತ್ವ ಮತ್ತು ಸ್ವರೂಪ

## ೧.೧ ಪ್ರಸ್ತಾವನೆ

ಮನುಷ್ಯ ತನ್ನ ಅನುಕೂಲಕ್ಕೆ ತಕ್ಕಂತೆ ಸಂವಹನ ರೂಪವಾಗಿ ಭಾಷೆಯನ್ನು ಬಳಕೆ ಮಾಡಿಕೊಂಡಿದ್ದಾನೆ. ಮಾನವನಿಗೆ ಇಂದ್ರಿಯಗಳ ಮೂಲಕ ಆದಂತಹ ಅನುಭವಗಳನ್ನು ಮಾತಿನಲ್ಲಿ ವ್ಯಕ್ತಪಡಿಸುತ್ತಾನೆ. ಆ ಮಾತು ವ್ಯವಸ್ಥಿತವಾಗಿ ಜೋಡಿಸಿ ಒಂದು ಸುಂದರ ಚೌಕಟ್ಟಿನಲ್ಲಿ ಹೇಳುವುದೇ ಮೌಖಿಕ ಪರಂಪರೆಯಾಗಿದೆ. ಮೌಖಿಕ ಸ್ವರೂಪದ ನಂತರ ಬರಹವು ಆವಿಷ್ಕಾರಗೊಂಡಿದೆ. ಜಗತ್ತಿನ ಎಲ್ಲಾ ಭಾಷೆ, ಸಾಹಿತ್ಯದ ಸೃಷ್ಟಿಗಿಂತ ಪೂರ್ವದಲ್ಲಿ ಮೌಖಿಕ ಸಾಹಿತ್ಯವೇ ಕಾರಣವಾಗಿರುವುದನ್ನು ನೋಡಬಹುದಾಗಿದೆ.

ಇಂದು ಸಾಹಿತ್ಯಲೋಕವು ಪ್ರಗತಿಯ ಶಿಖರ ಮುಟ್ಟಿದರೂ ಸಹ ಅದಕ್ಕೆ ಮೂಲತಃ ಜನಪದರ ವಾಕ್ ಪರಂಪರೆಯೇ ಕಾರಣ. ಅದರ ಪ್ರೇರಣೆ ಪ್ರಭಾವದಿಂದಲೇ ಒಂದು ಸಾಹಿತ್ಯದ ಬೆಳವಣಿಗೆ ಸಾಧ್ಯ ಎಂದೇ ಹೇಳಬಹುದಾಗಿದೆ. ವಾಕ್ ಪರಂಪರೆಯ ಗಾಯನ, ಕಥನದ ಮೂಲಕ ಕೇಳುಗನಿಗೆ ಮುದ ನೀಡುವಂತೆ ಕಾವ್ಯ, ಕಥೆಗಳನ್ನು ಕಟ್ಟಿಕೊಡುತ್ತಾರೆ. 'ಮಾತಿನ ಎಲ್ಲಾ ಅಂಶಗಳು ಇಡೀ ವ್ಯಕ್ತಿತ್ವದ ಭಾಗವಾಗಿ ಜನಪದ ಕಾವ್ಯದ ನಿರೂಪಣೆಯಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಮಾತನ್ನು ಎಲ್ಲ ಮಟ್ಟದ ಸೂಕ್ಷ್ಮತೆಗಳೊಂದಿಗೆ ಜನಪದ ಕಾವ್ಯ ಒಳಗೊಳ್ಳುತ್ತದೆ. ಹೀಗಾಗಿ ಕೇಳುವವರನ್ನೇ ಗುರಿಯಾಗಿಸಿಕೊಂಡ ನಿರ್ಮಿತಿ ಜನಪದ ಕಾವ್ಯದ್ದು. ಜನಪದ ಕಾವ್ಯವು ಗಾಯಕನಿಂದ ರೂಪಿತವಾಗಿರುವುದಾದರೂ ಅದು ಕೇಳುಗನಿಂದ ಒಂದು ಸಮಗ್ರತೆಯ ಸಿದ್ಧಿಯನ್ನು ಪಡೆಯುತ್ತದೆ. ಗಾಯಕ–ಕೇಳುಗ ಈ ಸಂಬಂಧಗಳು ಕ್ರಿಯಾಶೀಲವಾಗುವುದೇ ಇಲ್ಲಿ ಮಹತ್ವದ ನೆಲೆ' ಎಂದು ಬಸವರಾಜ ಕುರುವ ಹೇಳುತ್ತಾರೆ.

ಜನಪದ ಮಹಾಕಾವ್ಯಗಳ ಬಗೆಗೆ ಹೆಚ್ಚಿನ ಆಲೋಚನೆ, ಅಧ್ಯಯನ, ಮಹತ್ವ ತಂದು ಕೊಡುವುದು ನಮ್ಮ ಅಧ್ಯಯನದ ಉದ್ದೇಶವಾಗಿದೆ. ಮೌಖಿಕ ಸಾಹಿತ್ಯವು ಬರಹದ ಯಾವುದೇ ನೆರವಿಲ್ಲದೆ ಆರಂಭಗೊಂಡಿದೆ. ಪ್ರಸ್ತುತ ಸಂದರ್ಭದ ಮೌಖಿಕ ಪರಂಪರೆಯೂ ಕೂಡ ಮಾತನಾಡುವ ಮತ್ತು ಕೇಳುವ ನಡುವಣ ಸಂಬಂಧದ ಮಟ್ಟದ ಸಾಂಸ್ಕೃತಿಕ ಸೂಕ್ಷ್ಮಗಳನ್ನು ಒಳಗೊಂಡಿದ್ದು, ಈ ಸಂಬಂಧವು ವ್ಯಕ್ತಿ ಮತ್ತು ಅನೇಕ ಸಮಾಜದ ವಲಯಗಳ ಸೂಕ್ಷ್ಮ ನೆಲೆಗಳನ್ನು ಒಳಗೊಂಡಿದೆ. ಜನಪದ ಕಾವ್ಯ ಮಾತಿನ ಎಲ್ಲ ಸೂಕ್ಷ್ಮತೆಗಳನ್ನು ಒಳಗೊಂಡಿದ್ದು, ಕಾವ್ಯದ ಮೂಲಕ ಮೂಲ ಜನಪದ ಶಿಷ್ಟಾಚಾರ ಆಚರಣೆ, ಅನುಭವಗಳನ್ನು ಒಂದು ನಿರ್ದಿಷ್ಟ ಚೌಕಟ್ಟಿನ ಮೂಲಕ ತಾಳ, ಲಯಬದ್ಧವಾದ ರೀತಿಯಲ್ಲಿ ಕೇಳುಗರಿಗೆ ಹಿತವೆನಿಸುವ ಚೌಕಟ್ಟಿನೊಳಗೆ ಕಟ್ಟಿ ಕೊಡುತ್ತಾರೆ. ಜನಪದರ ಮೌಖಿಕ ಸಾಹಿತ್ಯ ಪರಂಪರೆಯು ಲಿಖಿತ ಸಾಹಿತ್ಯಕ್ಕೆ ಎಲ್ಲಾ ತರಹದಲ್ಲಿಯೂ ಪ್ರಭಾವ, ಪ್ರೇರಣೆ ಬೀರಿರುವುದನ್ನು ತಿಳಿಯಬಹುದಾಗಿದೆ.

## ೧.೨ ಅಧ್ಯಯನದ ಉದ್ದೇಶ

ಮೌಖಿಕ ಪರಂಪರೆಯಲ್ಲಿ ಜನಪದರ ಪಾರಂಪರಿಕ ಜ್ಞಾನದ ಹಿನ್ನಲೆಯಲ್ಲಿ ದೇಶಿಯ ಚಿಂತನೆಯ ನೆಲೆಯಲ್ಲಿ ಅವರ ಕಾವ್ಯದ ಸೃಷ್ಟಿಕಾರ್ಯದ ಶಕ್ತಿ ಮತ್ತು ಸಾಹಿತ್ಯ ಪರಂಪರೆ ಬೆಳೆದಿರುವ ಬಗೆಯ ಕುರಿತ ಚಿಂತನೆ ಮಾಡುವುದು. ಶಿಷ್ಟ ಸಾಹಿತ್ಯ ಮತ್ತು ಜನಪದ ಸಾಹಿತ್ಯದ ಅನ್ವಯಿಕ ವಿಚಾರಗಳನ್ನು ತಿಳಿಯುವುದಾಗಿದೆ. ಶಿಷ್ಟ ಸಾಹಿತ್ಯದ ನೆಲೆಯಲ್ಲಿಯೇ ವಿಚಾರಿಸುತ್ತಾ ಪರಿಶಿಷ್ಟ ಸಾಹಿತ್ಯ ಪರಂಪರೆಯ ಕಾವ್ಯ ಕಟ್ಟುವಿಕೆ ಸಾಮಾಜಿಕ ಕಳಕಳಿ, ಸಾಮಾನ್ಯ ಲೋಕದೃಷ್ಟಿ, ಗ್ರಹಿಕಾ ಸಾಮರ್ಥ್ಯ ಸಾಮಾಜಿಕ ಆಶಯಗಳು, ಸ್ತ್ರೀ ದೈವತ್ವದ ಸ್ಥಾನಮಾನ ಕಲ್ಪಿಸಿದ ಬಗೆಗಳು, ಮಾತೃಪ್ರಧಾನತೆಯ ಅಂಶಗಳು, ಸಮುದಾಯಗಳ ಸಂಪರ್ಕಿಸುವಿಕೆಯ ಕ್ರಮ, ಸಾಹಿತ್ಯ ಸೃಷ್ಟಿಸುವ ಕ್ರಮ, ಸಮಾಜದಲ್ಲಿ ಹಕ್ಕು ಸ್ಥಾಪಿಸುವಿಕೆಯಲ್ಲಿನ ವ್ಯಕ್ತಿ ನಿಷ್ಠತೆ ಪಾತ್ರಗಳು, ಸಮೂಹ ಪ್ರಜ್ಞೆಯ ಸಮಷ್ಟಿ ಮನೋಧರ್ಮದ ವಿಚಾರಗಳು ವ್ಯಕ್ತವಾಗಿರುವುದನ್ನು ನೋಡುವುದಾಗಿದೆ. ಸಮಾಜದ ಅನಿಷ್ಟ ಪದ್ಧತಿಗಳು ತಲೆ ಎತ್ತಿದ ರೀತಿ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ನಿಷ್ಠತೆ ಸ್ಥಾಪಿಸುವ ಮೌಖಿಕರ ಶಕ್ತಿಪ್ರಧಾನತೆ ಎಂಥದ್ದು ಎಂದು ತಿಳಿಯಲಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಯಲ್ಲಮ್ಮನ ಕಥನ ಕಾವ್ಯ ಅಧ್ಯಯನವು ಒಂದು ನಿರ್ದಿಷ್ಟತೆಯ ವ್ಯಾಪ್ತಿಯಲ್ಲಿ ಕೈಗೊಂಡಿದ್ದು ಅಧ್ಯಯನದ ಉದ್ದೇಶ ಮತ್ತು ಕಾಲಮಿತಿಯ ಪರಿಣಾಮವಾಗಿ ಇದರ ವ್ಯಾಪ್ತಿಯು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಸಹಾಯದಲ್ಲಿ ಡಾ.ಎಂ.ಎಸ್. ಸುಂಕಾಪುರ ಸಂಪಾದಕತ್ವದ 'ಜೋಗತಿ ಹಾಡು', ಕೃತಿ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯದಲ್ಲಿ ಎಸ್.ಜಿ ಸಿದ್ಧರಾಮಯ್ಯ, ಕೆ. ಆರ್. ಸಂಧ್ಯಾರೆಡ್ಡಿ ಸಂಪಾದಕತ್ವದ 'ಏಳುಕೊಳ್ಳದ ಎಲ್ಲಮ್ಮ' ಮತ್ತು ವಿದ್ಯಾನಿಧಿ ಪ್ರಕಾಶನದ ಪ್ರೊ. ಕೆ. ಎಂ. ಮೇತ್ರಿ ಸಂಪಾದಿಸಿರುವ ಬುರ್ರಕಥಾ ಈರಮ್ಮ ಹಾಡಿರುವ ಎಲ್ಲಮ್ಮನ ಕಥನ ಕಾವ್ಯ ಕೃತಿಗಳಿಗೆ ಸೀಮಿತಗೊಳಿಸಲಾಗಿದೆ.

## ೧.೪ ಅಧ್ಯಯನದ ಮಹತ್ವ

ಯಲ್ಲಮ್ಮನ ಕಥನ ಕಾವ್ಯವು ಪೌರಾಣಿಕ ಹಿನ್ನೆಲೆಯಿಂದ ಬಂದಿದ್ದರು ಸಹ ಇದಕ್ಕೆ ಐತಿಹಾಸಿಕ ಕುರುಹುಗಳು ಹಾಗೂ ಇತಿಹಾಸಕ್ಕೆ ಸಂಬಂಧಿಸಿದ ದಾಖಲೆಗಳೂ ಸಹ ಕಂಡು ಬರುತ್ತವೆ. ಯಲ್ಲಮ್ಮನ ಕಾವ್ಯ ಮೊದಲಿಗೆ ಜಾನಪದ ಸ್ವರೂಪದ ಹಿನ್ನೆಲೆಯಿಂದ ರಚನೆಯಾಗಿದ್ದು ಪ್ರಸ್ತುತ ಸಂದರ್ಭದಲ್ಲಿ ಗ್ರಂಥಸ್ಥ ಸ್ವರೂಪಕ್ಕೆ ಒಳಪಟ್ಟಿರುವುದನ್ನು ನೋಡಬಹುದಾಗಿದೆ. ಯಲ್ಲಮ್ಮನ ಕಾವ್ಯ ಮೌಖಿಕ ಪರಂಪರೆಯಿಂದ ಪುಸ್ತಕ ರೂಪ ತಾಳಿರುವುದು ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಅಂಶಗಳು ಕಾರಣವಾಗಿವೆ. ಜಾಗತೀಕರಣದ ಪ್ರಭಾವದಿಂದಾಗಿ ಸಮಾಜದ ಎಲ್ಲಾ ಸ್ತರಗಳು ಬದಲಾವಣೆಗೆ ಒಳಗಾಗಿದ್ದು ಇಡೀ ಪ್ರಪಂಚ ಒಂದು ಗ್ರಾಮದಂತೆ ಹತ್ತಿರವಾಗುತಿದ್ದು, ಸಾರಿಗೆ, ಸಂಪರ್ಕ, ಸಮೂಹ ಮಾಧ್ಯಮಗಳ ಪ್ರಭಾವಕ್ಕೆ ಒಳಗಾದ ಸಮಾಜದ ಪ್ರತಿಯೊಂದು ರಂಗವೂ ಸಹ ಬದಲಾಗಿವೆ. ಜಾನಪದ ಸಾಹಿತ್ಯವೂ ಸಹ ಇಂತಹ ಬದಲಾವಣೆಗೆ ಒಳಗಾಗಿದ್ದು, ಜನಪದ ಕಥನ ಕಾವ್ಯಗಳ ಸ್ವರೂಪ, ಓದುವ ಕ್ರಮ ಹಾಗೂ ಅರ್ಥಗ್ರಹಿಸುವ ವಿಧಾನವು ಬದಲಾಗಿದೆ. ಪಸ್ತುತ ಅಧ್ಯಯನವು ಯಲ್ಲಮ್ಮನ ಕಥನ ಕಾವ್ಯಗಳ ವಿಶ್ಲೇಷಣೆಯು ಅನೇಕ ಮಹತ್ವದ ಅಂಶಗಳು ಈ ರೀತಿಯಾಗಿರುವುದನ್ನು ಕಾಣಬಹುದಾಗಿದೆ.

* ಯಲ್ಲಮ್ಮನ ಕಥನ ಕಾವ್ಯಗಳಲ್ಲಿ ಮಾತೃಪ್ರಧಾನ ಕುಟುಂಬದ ಸ್ತ್ರೀಯರನ್ನು ನೋಡುವ ದೃಷ್ಟಿಕೋನಗಳು ಯಾವ ರೀತಿಯಾಗಿವೆ ಹಾಗೂ ಸ್ತ್ರೀಯನ್ನು ಪೂಜ್ಯನೀಯ ಭಾವನೆಗಳಿಂದ ಕಾಣುವುದನ್ನು ತಿಳಿಯಲಾಗಿದೆ.
* ಗ್ರಾಮೀಣ ಸಮುದಾಯ ಮತ್ತು ನಗರ ಸಮುದಾಯಗಳ ಕೆಳವರ್ಗದ ಕುಟುಂಬಗಳು; ಮಹಿಳೆಯರನ್ನು ಅಸಹಾಯಕ ಸ್ಥಿತಿಗೆ ತಳ್ಳಿದಾಗ ಅವರು ಯಲ್ಲಮ್ಮನ ಆರಾಧಕರಾಗಿ, ದೇವಿಯ ಅನುಯಾಯಿಗಳಾಗಿರುವುದನ್ನು ತಿಳಿಯಬಹುದಾಗಿದೆ.
* ಯಲ್ಲಮ್ಮನ ಕಥನ ಕಾವ್ಯಗಳನ್ನು ವೃತ್ತಿಗಾಯಕರಾದ ಚೌಡಿಕೆ ಸಂಪ್ರದಾಯಸ್ತರು ಇಡೀ ರಾತ್ರಿ ಹಾಗೂ ಕಾಲಮಿತಿಯಲ್ಲಿ ಯಲ್ಲಮ್ಮನ ಚರಿತ್ರೆಯನ್ನು ಹಾಡಿ ನಲಿಯುವ ಮತ್ತು ಮನರಂಜನೆ ಮಾಡುವ ಕ್ರಮವನ್ನು ಗ್ರಹಿಸಬಹುದಾಗಿದೆ.
* ಯಲ್ಲಮ್ಮ ದೇವಿಯ ಆಚರಣೆಯಲ್ಲಿ ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಮುತ್ತು ಕಟ್ಟಿಸುವುದು, ಮುಂತಾದ ಮೌಢ್ಯ ಆಚರಣೆಗಳನ್ನು ವಿಶ್ಲೇಷಣಾತ್ಮಕವಾಗಿ ಗಮನಿಸಲಾಗಿದೆ.
* ಪ್ರಸ್ತುತ ಕಾವ್ಯದಲ್ಲಿ ಬರುವ ಮಾಟ-ಮಂತ್ರ, ದೇವದಾಸಿ ಪದ್ಧತಿಗಳ ಕುರಿತು ವಿಶ್ಲೇಷಣಾತ್ಮಕವಾಗಿ ಗಮನಿಸಲಾಗಿದೆ.
* ಈ ಕಾವ್ಯದ ಮಹತ್ವವು ಮಾಟ – ಮಂತ್ರಗಳು ದೇವದಾಸಿ ಪದ್ಧತಿಗಳು, ಅಮ್ಮಾ ಸಂಪ್ರದಾಯದ ಮಹತ್ವ ತಿಳಿಯಲಾಗಿದೆ.
* ಗ್ರಾಮೀಣ ದೇವತೆಗಳಲ್ಲಿ ಸ್ತ್ರೀ ದೇವತೆಯ ಮಹತ್ವ, ಸ್ತ್ರೀಯರನ್ನು ವ್ಯಕ್ತಿಯನ್ನಾಗಿ – ದೈವವಾಗಿ ನೋಡುವುದರ ಕುರಿತು ವಿಶ್ಲೇಷಣಾತ್ಮಕವಾಗಿ ಗಮನಿಸಲಾಗಿದೆ.
* ಶಿಷ್ಟ ಹಾಗೂ ಪರಿಶಿಷ್ಟ ಸಾಹಿತ್ಯದಲ್ಲಿ ಯಲ್ಲಮ್ಮನ ಬಗೆಗಿನ ಕಲ್ಪನೆಗಳು, ಜನಪದರ ಕಲ್ಪನೆಯಲ್ಲಿ ಯಲ್ಲಮ್ಮನ ಬಗೆಗಿನ ಕಲ್ಪನೆಗಳ ಮಹತ್ವ ಪರಿಶೀಲಿಸುವುದು ಮತ್ತು ಆಚರಣಾ ಪದ್ಧತಿಗಳ ಮಹತ್ವ ತಿಳಿಯಲಾಗಿದೆ.
* ಯಲ್ಲಮ್ಮನ ಕಾವ್ಯದ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀವಾದಿ ನೆಲೆಗಳ ಮಹತ್ವ ಗ್ರಹಿಸಲಾಗಿದೆ.
* ಯಲ್ಲಮ್ಮ ದೇವಿಯ ಕಾವ್ಯಗಳ ಮೂಲಕ ದೇವಿ ಆರಾಧನೆ ಹಾಗೂ ಪವಾಡಗಳ ಕುರಿತಾದ ಭಕ್ತರ ಕಲ್ಪನೆಯು ಮಹತ್ವ ತಿಳಿಯಲಾಗಿದೆ.
* ಕೃಷಿ ಆಧಾರಿತ ಸಮೂಹಗಳು ದೇವಿಯ ಆಚರಣೆ, ಪೂಜ್ಯನೀಯ ಭಾವನೆಗಳ ಮಹತ್ವ ಏನೆಂಬುದನ್ನು ತಿಳಿಯಲಾಗಿದೆ.
* ಸ್ತ್ರೀ ವ್ಯಕ್ತಿ-ದೇವಿಯಾಗಿ ನೋಡುವ ಎರಡು ನೆಲೆಗಳನ್ನು ಗಮನಿಸಲಾಗಿದೆ.
* ಸಾಮಾಜಿಕ ವ್ಯವಸ್ಥೆಗೆ ನಿದರ್ಶನವಾಗಿ ಕಾಣುವ ಎಲ್ಲಮ್ಮ ದೇವಿಯ ಕಥನದ ಸ್ತ್ರೀ ಕೇಂದ್ರಿತ ನೆಲೆಗಳನ್ನು ಗುರುತಿಸಲಾಗಿದೆ.

### ೧.೫ ಅಧ್ಯಯನದ ಸ್ವರೂಪ

ಯಲ್ಲಮ್ಮನ ಕಥನ ಕಾವ್ಯದ ಅಧ್ಯಯನದ ಮೂಲಕ ಜಾನಪದ ಸಂಸ್ಕೃತಿ ದೇವ ದಾನವರ ಸಮ್ಮಿಲನ ಯಾವ ರೀತಿಯಲ್ಲಿದೆ ಪ್ರಕೃತಿಗೆ ಮಾನವರು ತಲೆಬಾಗಿ ದೈವತ್ವದ ಕಲ್ಪನೆ ನೀಡಿದ ಸಂದರ್ಭಗಳು, ಎಲ್ಲಮ್ಮನ ಕುರಿತಾದ ಕಾವ್ಯಗಳು, ಕಾವ್ಯ ಸೃಷ್ಟಿಕರ್ತರುಗಳು, ಶಿಷ್ಟ ಮತ್ತು ಪರಿಶಿಷ್ಟ ಸಾಹಿತ್ಯದಲ್ಲಿ ಎಲ್ಲಮ್ಮನ ಕುರಿತಾದ ನಂಬಿಕೆಗಳು, ಆಚರಣೆಗಳು, ವಿಚಾರಧಾರೆಗಳ ವಿಶ್ಲೇಷಣೆ ಎಲ್ಲಮ್ಮನ ಕುರಿತಾದ ಐತಿಹ್ಯಗಳು ಮತ್ತು (ಪುರಾಣಗಳ) ಪೌರಾಣಿಕ ಸಂಗತಿಗಳು ತಿಳಿಯುವುದು. ಎಲ್ಲಮ್ಮನ ಕಾವ್ಯ ವ್ಯಕ್ತಿಯಿಂದ ವ್ಯಕ್ತಿಗೆ ಮತ್ತು ಪ್ರದೇಶದಿಂದ ಪ್ರದೇಶಕ್ಕೆ ಯಾವ ರೀತಿಯಾಗಿ ಭಿನ್ನತೆಯ ಸ್ವರೂಪ ಹೊಂದಿದೆ ಎಂದು

ತಿಳಿಯುವುದು. ಎಲ್ಲಮ್ಮನ ಕುರಿತಾದ ನಂಬಿಕೆಗಳು, ಹರಕೆಗಳು, ದೇವದಾಸಿ ಪದ್ಧತಿ, ದೈವತ್ವದ ಕಲ್ಪನೆಯ ಸ್ವರೂಪ ತಿಳುವಳಿಕೆ, ಗ್ರಾಮ ದೇವತೆ, ಮಾತೃಪ್ರಧಾನತೆಯ ಕಲ್ಪನೆಯಲ್ಲಿ ಎಲ್ಲಮ್ಮ ದೇವಿಯ ಆಚರಣೆ ಸ್ತ್ರೀಗೆ ದೈವತ್ವ ಕಲ್ಪನೆ ಮತ್ತು ವ್ಯಕ್ತಿಯಾಗಿ ದೇವದಾಸಿ ಪದ್ಧತಿ ಆಚರಿಸುವುದು ಸಾಮಾಜಿಕ ಸಮಸ್ಯೆಗಳ ಬಗೆಗಿನ ಚಿಂತನೆಗಳು ಮೊದಲಾದ ಅನೇಕ ಅಂಶಗಳ ಒಳಗೊಂಡ ಈ ಅಧ್ಯಯನ ಸಾಮಾಜಿಕವಾಗಿ ಪುರಾಣ ಕಾಲದಿಂದಲೂ ಆಚರಣೆಯಲ್ಲಿರುವ ಈ ಎಲ್ಲಮ್ಮ ದೇವಿಯ ದೈವತ್ವದ ಕಲ್ಪನೆಯ ಬಗೆಗೆ ಚಿಂತಿಸಲಾಗುವುದು. ಈ ಅಧ್ಯಯನದ ಮೂಲಕ ಮೌಖಿಕರು ಕಟ್ಟಿದ ಕಾವ್ಯದ ಗ್ರಂಥಸ್ಥ ಸ್ವರೂಪದ ವಿಶ್ಲೇಷಣೆ ಅದರಲ್ಲಿ ಆಚರಣೆ, ನಂಬಿಕೆ, ಸಾಮಾಜಿಕ ಪಿಡುಗುಗಳು ಮತ್ತು ದೈವತ್ವದ ಬಗ್ಗೆ ಇರುವ ತತ್ವಗಳ ಚಿಂತನೆ ನಡೆಸಲಾಗುವುದು.

* ಈ ಅಧ್ಯಯನದ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಸ್ವರೂಪ ಕುರಿತು ಹೇಳಲಾಗಿದೆ.
* ಎರಡನೇ ಅಧ್ಯಾಯದಲ್ಲಿ ಯಲ್ಲಮ್ಮನ ಕುರಿತಾದ ಇದುವರೆಗಿನ ಅಧ್ಯಯನ ಸಮೀಕ್ಷೆ ಮಾಡಲಾಗಿದೆ.
* ಅಧ್ಯಾಯ ಮೂರರಲ್ಲಿ ಯಲ್ಲಮ್ಮನ ಕಾವ್ಯ ಮತ್ತು ಸಾಹಿತ್ಯ ಪರಂಪರೆ ಎಂಬುದನ್ನು ಜೋಗತಿಯರ ಹಾಡು, ಏಳುಕೊಳ್ಳದ ಯಲ್ಲಮ್ಮನ ಕಥನ ಕಾವ್ಯ ಮತ್ತು ಯಲ್ಲಮ್ಮನ ಕಥನ ಕಾವ್ಯ ಎಂಬ ಕಾವ್ಯಗಳನ್ನು ವಿಶ್ಲೇಷಿಸಲಾಗಿದೆ.
* ಅಧ್ಯಾಯ ನಾಲ್ಕರಲ್ಲಿ ಶಿಷ್ಟ ಮತ್ತು ಪರಿಶಿಷ್ಟ ಸಾಹಿತ್ಯದಲ್ಲಿ ಯಲ್ಲಮ್ಮ ಎಂಬುದನ್ನು, ಜನಪದ ಕಾವ್ಯ ಸ್ವರೂಪ ಮತ್ತು ಆಚರಣಾಲೋಕ ಕುರಿತು ಅಧ್ಯಯನ ಮಾಡಲಾಗಿದೆ
* ಅಧ್ಯಾಯ ಐದರಲ್ಲಿ ಸಮಾರೋಪ ಹಾಗೂ ಅಧ್ಯಾಯ ಆರರಲ್ಲಿ ಪರಾಮರ್ಶನ ಗ್ರಂಥಗಳನ್ನು ಹಾಕಲಾಗಿದೆ

## ಅಧ್ಯಾಯ –೨
## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಮೌಖಿಕ ಪರಂಪರೆಯಿಂದ ಕಾವ್ಯದ ಸೃಷ್ಟಿ, ಗಾಯನ ಕಥನ ಗೀತೆಯ ಸ್ವರೂಪದಲ್ಲಿದ್ದ ಎಲ್ಲಮ್ಮನ ಕುರಿತಾದ ಸಾಹಿತ್ಯವನ್ನು ಬದಲಾದ ಕಾಲಘಟ್ಟಕ್ಕೆ ತಕ್ಕಂತೆ ಕೃತಿ ರಚನಾ ಕಾರ್ಯವನ್ನು ಮಾಡಿ ಸಾಹಿತ್ಯಾಸಕ್ತರಿಗೆ ಪ್ರೋತ್ಸಾಹ ನೀಡುವಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ ಮತ್ತು ಮೈಸೂರು ವಿಶ್ವವಿದ್ಯಾಲಯಗಳ ಪಾತ್ರ ಮಹತ್ವದ್ದಾಗಿದೆ.

ಎಲ್ಲಮ್ಮನ ಕಾವ್ಯ, ಕಥನ, ಗೀತೆ, ಪೌರಾಣಿಕತೆ, ಇತಿಹಾಸಕ್ಕೆ ಸಂಬಂಧಿಸದಂತೆ ಜನಪದರ ನಂಬಿಕೆ ವೃತ್ತಿಗಾಯಕರ ಗಾಯನ, ಚೌಡಿಕೆಯವರ ವಾಕ್ ಪರಂಪರೆ ಮೊದಲಾದ ಅನೇಕ ರೀತಿಯಿಂದ ಎಲ್ಲಮ್ಮನ ಕಾವ್ಯ ಸಂಗ್ರಹ ಮಾಡಲಾಗಿದ್ದು ಅದನ್ನು ಈ ಕೆಳಗಿನಂತೆ ತಿಳಿಯಲಾಗಿದೆ.

೧. **ಜೋಗತಿಯ ಹಾಡು :** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
ಸಂ. ಡಾ. ಎಂ.ಎಸ್. ಸುಂಕಾಪುರ

ಈ ಕೃತಿಯಲ್ಲಿ ಸಂಗ್ರಹಿಸಿದ ಎಲ್ಲಮ್ಮನ ಕಾವ್ಯಗಳ ಬಿಡಿ ಬಿಡಿ ಕಾವ್ಯಗಳನ್ನು ವೃತ್ತಿಗಾಯಕರು ತಮ್ಮ ಜೀವನದ ಅನುಭವ ಕಂಡು, ಕೇಳಿದ ಕೆಲವು ಕಾವ್ಯಾತ್ಮಕ ಕಥೆಯನ್ನು ಸಂಗ್ರಹಿಸಲಾಗಿದೆ. ವೃತ್ತಿಗಾಯಕರ ನಂಬಿಕೆ, ಆಚರಣೆ, ಪದ್ಧತಿಗಳ ವಿಚಾರವಾಗಿ ಎಲ್ಲಮ್ಮನ ಬಗೆಗಿನ ಅವರ ಅನಿಸಿಕೆಗಳ ಸಂಗ್ರಹ ಇದಾಗಿದೆ. ಭಾರತದಲ್ಲಿ ಶಕ್ತಿ ದೇವತೆಯ ಆರಾಧನೆ ಅನಾದಿಕಾಲದಿಂದಲೂ ಆಚರಣೆಯಲ್ಲಿದ್ದು ಅನೇಕ ಹೆಸರುಗಳಿಂದ ಬೇರೆ ಬೇರೆ ಪ್ರಾಂತ್ಯಕ್ಕೆ ಬೇರೆ ಬೇರೆ ರೀತಿಯಾಗಿ ಆಚರಿಸುತ್ತಾರೆ.

ಉದಾಹರಣೆಗೆ ಮಾರಿ, ದುರ್ಗಿ, ಕಾಳಿ, ಎಲ್ಲಮ್ಮ, ಚೌಡಮ್ಮ ಮೊದಲಾದ ಅನೇಕ ಶಕ್ತಿ ದೇವತೆಗಳ ಆಚರಣೆ ಇಂದಿಗೂ ಮಾಡುವುದನ್ನು ಕಾಣಬಹುದಾಗಿದೆ.

ಪುರಾಣ ಪುಣ್ಯ ಕಥೆಗಳಲ್ಲಿ ದೇವಿಯ ಮಹಿಮೆಯನ್ನು ತಿಳಿಸಲಾಗಿದೆ. ಪ್ರಕೃತಿ ವಿಕೋಪಕ್ಕೆ ಅಂಜಿದ ಮೂಲ ಮಾನವ ಭಯ–ಭೀತಿಯನ್ನು ಉಂಟು ಮಾಡುವ ಸ್ಥಳಗಳಿಗೆ ಉಗ್ರ ದೇವತೆ ರೂಪ ನೀಡಿ ಪೂಜಿಸುತ್ತಾ ಬಂದಿದ್ದಾನೆ. ಪ್ರಕೃತಿ ಆರಾಧನೆಗೆ ಹೆಚ್ಚು ಒತ್ತು ನೀಡಿದ್ದಾನೆ.

ಜೋಗತಿ ಹಾಡು ಕಾವ್ಯ ಸಂಗ್ರಹದಲ್ಲಿ ವೃತ್ತಿಗಾಯಕರು ನಂಬಿರುವ ಎಲ್ಲಮ್ಮನ ಬಗೆಗಿನ ಅವರ ಕಲ್ಪನೆಯ ಎಲ್ಲಮ್ಮನ ಚಿತ್ರಣ ಕಾಣಬಹುದಾಗಿದೆ. ಈ ಕಾವ್ಯದಲ್ಲಿ ಎಲ್ಲಮ್ಮ ಆದಿಶಕ್ತಿಯಾಗಿ, ಶಕ್ತಿಯ ಅವತಾರವಾಗಿ, ಜಗದಂಬೆಯಾಗಿ, ತಾಯಿಯಾಗಿ, ಭಾಗ್ಯದ ದೇವಿಯಾಗಿ, ರೇಣುಕೆಯಾಗಿ, ಜಗ ಪಾವನ ಮಾಡುವ ಜಗದಂಬೆಯಾಗಿ, ಭವಾನಿಯಾಗಿ, ಸತ್ಯವಂತೆಯು ಆಗಿ ಮೊದಲಾದ ಅನೇಕ ರೀತಿಯ ಸ್ತುತಿ ಗೀತೆಗಳ ಮಾದರಿಗಳನ್ನು ಕಾಣಬಹುದಾಗಿದೆ.

ದೇವಿಯ ಚರಿತ್ರೆ ಸಾರುವ ಗೀತೆಗಳಲ್ಲಿ ಎಲ್ಲಮ್ಮ ದೇವಿಯ ಜೀವನ ಚರಿತ್ರೆ, ಎಲ್ಲಮ್ಮಳ ಹುಟ್ಟು, ಲಗ್ನ, ಅವಳ ಪವಾಡ, ಸತ್ಯವಂತಿಕೆ, ಧೈರ್ಯ, ಪತಿ ಧರ್ಮ, ಮೊದಲಾದ ಸಂಗತಿಗಳ ತಿಳಿಯಬಹುದಾಗಿದೆ.

ದೇವಿಯ ವರ್ಣನೆಯ ಹಾಡುಗಳಲ್ಲಿ ಎಲ್ಲಮ್ಮನ ಪೂಜಾ ವಿಧಾನಗಳು, ಜಾತ್ರೆ ಉತ್ಸವ ವರ್ಣನೆ, ಅವರ ನಂಬಿಕೆ ಎಲ್ಲಮ್ಮನ ಬಗೆಗಿನ ಅವರ ಕಲ್ಪನೆ, ಎಲ್ಲಮ್ಮನ ಗುಡಿ, ಯಕ್ಕಯ್ಯ ಜೋಗಯ್ಯ ಚಿತ್ರಣ, ದೇವಿಯ ಪರಿಶೆ ವರ್ಣನೆ ಇದೆ. ದೇವಿಯ ಮಹಿಮೆಯಲ್ಲಿ ಎಲ್ಲಮ್ಮನ ಬಗೆಗಿನ ಕರುಣಾಮಯ, ಕಾಪಾಡುವಂತ ಗುಣ, ಕೃಷ್ಣ ಕಾರ್ಪಣ್ಯ ಬಗೆಹರಿಸುವ ರೀತಿ, ನಂಬಿದವರಿಗೆ ವರವ ಪಾಲಿಸುವವಳು ಎನ್ನುವ ನಂಬಿಕೆಯ ಹಾಡುಗಳಿವೆ.

ಕೊನೆಯದಾಗಿ ಮಂಗಳಾರತಿ ಹಾಡುಗಳ ಮೂಲಕ ಈ ಕೃತಿ ಕೊನೆಗೊಳ್ಳುತ್ತದೆ. ಈ ರೀತಿಯಾಗಿ ಈ ಕೃತಿಯು ಎಲ್ಲಮ್ಮನ ಸ್ತುತಿಗೀತೆಯಿಂದ ಮಂಗಳಾರತಿಯವರೆಗೆ ಐದು ರೀತಿಯಾದ ವಿಭಾಗಕ್ರಮ ಹೊಂದಿದ ಗೀತೆಗಳ ಸಂಗ್ರಹವಾಗಿದ್ದು ಉತ್ತಮವಾಗಿ ಮೂಡಿಬಂದಿದೆ.

೨. **ಸುವರ್ಣ ಜನಪದ ಕಾವ್ಯ** : ಸಂಪಾದಕರು ಎಸ್.ಜಿ. ಸಿದ್ದರಾಮಯ್ಯ ಹಾಗೂ ಕೆ.ಆರ್. ಸಂಧ್ಯಾ ರೆಡ್ಡಿ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪ್ರಕಟವಾಗಿರುವ ಈ ಕೃತಿಯು ಜನಪದ ಹೆಣ್ಣಿನ ಬದುಕನ್ನು ಕಟ್ಟಿಕೊಡುವ ಕಾರ್ಯ ಮಾಡಿದೆ. ಹೆಣ್ಣು ಹುಟ್ಟಿನಿಂದ ಸಾವಿನವರೆಗೆ ಯಾವ ರೀತಿಯಾಗಿ ತನ್ನ ಜವಾಬ್ದಾರಿ ನಿರ್ವಹಿಸುತ್ತಾಳೆ. ಆಚಾರ ವಿಚಾರಗಳಲ್ಲಿ ಹೆಣ್ಣಿನ ಪಾತ್ರದ ಚಿತ್ರಣ, ಹೆಣ್ಣಿಗೆ ನಾಯಕಿ ಪಾತ್ರ ನೀಡಿ ದೈವತ್ವದ ಕಲ್ಪನೆಯನ್ನು ಕಟ್ಟಿಕೊಟ್ಟಿದೆ.

ಈ ಕೃತಿಯಲ್ಲಿ ವಿಳುಕೊಳ್ಳದ ಎಲ್ಲಮ್ಮ ಈ ಕಥನದಲ್ಲಿ ಎಲ್ಲಮ್ಮನ ಜನನದಿಂದ ಹಿಡಿದು ಅವಳ ಪವಾಡ, ಶಕ್ತಿ, ಮಹಿಷ ಸಂಹಾರ, ನಂತರ ರೇಣುಕೆ ಜಮದಗ್ನಿಯರ ಮದುವೆ, ಪರಶುರಾಮನ ಪಡೆದಿದ್ದು, ಯಕ್ಕಯ್ಯ-ಜೋಗಯ್ಯರ ಸವದತ್ತಿ ಅರಸರನ್ನು ರೇಣುಕೆ ಸೇವೆ ಮಾಡಿ ಅವರ ಮೆಚ್ಚಿಸಿದ್ದು, ಜಮದಗ್ನಿ ಋಷಿ ಸತ್ತ ದಿವಸ ಹುಣ್ಣಿಮೆ ಇದ್ದುದು ಅದೇ ರಂಡಿ ಹುಣ್ಣಿಮೆ ಎಂದು ಪರಶುರಾಮ ತಂದೆಯ ಪ್ರಾಣ ಪಡೆದದ್ದಕ್ಕೆ ಮುತ್ತೈದೆ ಹುಣ್ಣಿಮೆ ಎಂದು ಕರೆಯುತ್ತಾರೆ. ಈ ರೀತಿಯ ಕಥೆಯು ಶಿವ, ನಾರದರ ಸಂಗಡ ನಡೆಯುವ ಪರಿಯು ಚಿಕ್ಕದಾಗಿ ಚೊಕ್ಕದಾಗಿ ಮೂಡಿಬಂದಿದೆ.

೩. **ಎಲ್ಲಮ್ಮನ ಕಾವ್ಯ** : ಸಂಪಾದಕರು ಪ್ರೊ ಕೆ. ಎಮ್. ಮೇತ್ರಿ, ಹಾಡಿದವರು ಬುರ್ರಕಥಾ ಈರಮ್ಮ ಪ್ರಕಾಶಕರು, ವಿದ್ಯಾನಿಧಿ ಪ್ರಕಾಶನ ಗದಗ.

ಈ ಎಲ್ಲಮ್ಮನ ಕಥನ ಕಾವ್ಯ ಸಂಗ್ರಹಿಸಿದ ಪ್ರೊ ಕೆ. ಎಮ್. ಮೇತ್ರಿಯವರು ತಮ್ಮ ಲೇಖನದಲ್ಲಿ ಸವದತ್ತಿ ಎಲ್ಲಮ್ಮ, ಚಂದ್ರಗುತ್ತಿಯ ಎಲ್ಲಮ್ಮ ಮತ್ತು ಹೊನ್ನತ್ತಿಯ ಹೊನ್ನಮ್ಮ ಇವರು ಮೈಲಾರಲಿಂಗನ ತಂಗಿಯರು. ಈ ಮೂವರು ತಮ್ಮ ತವರು ಮನೆಯಿಂದ ಅಂದರೆ ಮೈಲಾರಲಿಂಗನಿಂದಲೇ ಬಂಡಾರವನ್ನು ತಂದಿದ್ದಾರೆಂದು ದಾಖಲಿಸಿದ್ದಾರೆ. ಎಲ್ಲಮ್ಮನ ಕುರಿತಾಗಿ ಇತ್ತೀಚಿನ ಎಲ್ಲ ಸಂಶೋಧಕರು ಜೈನರಾಗಿ ನೋಡಲು ಪ್ರಯತ್ನಿಸುತ್ತಿದ್ದಾರೆ. ಎಲ್ಲಮ್ಮ ಎಲ್ಲರ ಅಮ್ಮ ಹೇಗೆ? ಏಕೆ? ಆದಳು ಎಂದು ಸಂಶೋಧಿಸುತ್ತಿದ್ದಾರೆ. ವಾಸ್ತವದಲ್ಲಿ ಅವಳು ಏನನ್ನು ಸಂಕೇತಿಸುವಳು? ಎಲ್ಲಮ್ಮನ ಆಚರಣೆಗಳು, ವಿಧಿ ನಿಷೇಧಗಳು,

ಸಂಪ್ರದಾಯಗಳು ಪೂರ್ವಿಕರ ಸೃಷ್ಟಿಕಾರ್ಯದಿಂದ ಅವು ಜನೋಪಯೋಗಿ ಸ್ವರೂಪ ಹೊಂದಿದ್ದರ ಫಲವಾಗಿ ಅವುಗಳ ಪಾಲನೆ, ಆಚರಣೆಯು ಮುಂದುವರೆಯುತ್ತಾ ಸಾಗಿ ಬಂದಿದೆ.

ಎಲ್ಲಮ್ಮನ ಕಥನ ಕಾವ್ಯ ಮಾಋಷಿ ಮತ್ತು ಎಲ್ಲಮ್ಮನ ಜನನದ ಮೂಲಕ ಆರಂಭವಾಗುತ್ತದೆ. ಈ ಕಾವ್ಯ ಪೌರಾಣಿಕ ಮೂಲದಿಂದ ಆರಂಭವಾಗಿ, ಎಲ್ಲಮ್ಮ ಶಿವ–ಪಾರ್ವತಿಯರ ಸಂಭಾಷಣೆಯ ಮೂಲಕ ಮಣ್ಣಿನಿಂದ ಗೊಂಬೆ ಮಾಡಿ ಜೀವ ತುಂಬ್ಸಿ ಎಲ್ಲಮ್ಮಳಾಗಿ ಲೋಕಕ್ಕೆ ಬಿಡುತ್ತಾರೆ. ಎಲ್ಲಮ್ಮ ಜಮ್ಮಿಗಿರಿ ಪಟ್ಟಣದಲ್ಲಿ ಬೆಳೆದು ಮಾಋಷಿಯೊಂದಿಗೆ ವಿವಾಹವಾಗುತ್ತಾಳೆ.

ಅನೇಕ ಷರತ್ತುಗಳು ಪೂರೈಸಿ ವಿವಾಹವಾದ ಎಲ್ಮಮ್ಮ ತನ್ನ ಪತಿ ಭಕ್ತಿಯಲ್ಲಿ ಉನ್ನತವಾದ ನಿಷ್ಠೆಯಿಂದ ಪತಿಸೇವೆ ಮಾಡುತ್ತಾಳೆ. ಆದರೆ ಪುರುಷ ಪ್ರಧಾನ ಸಮಾಜಿಕ ನೆಲೆಯಲ್ಲಿ ಎಲ್ಲಮ್ಮಳಿಗೆ ಕಾಯಿಲೆ ಉಂಟಾದಾಗ ಅನುಮಾನಿಸಿ ಮನೆಯಿಂದ ಹೊರಗೆ ಹಾಕುವ ಪ್ರಸಂಗ ಎಲ್ಲಮ್ಮ ಮನಪೂರ್ವಕವಾಗಿ ಒಪ್ಪಿಕೊಳ್ಳುವ ರೀತಿ ಸಾಮಾಜಿಕ ಹಿತೈಶಿ ಭಾವನೆ ಇಲ್ಲಿ ಕಂಡುಬರುತ್ತದೆ.

ಎಲ್ಲಮ್ಮಳಿಗೆ ಪರಶುರಾಮ ಜನಿಸಿದ ನಂತರ ಅವಳ ಸತ್ವ ಪರೀಕ್ಷೆ ನಡೆಯುತ್ತದೆ. ಪರಶುರಾಮ ತನ್ನ ತಂದೆಯ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸುತ್ತಾನೆ. ತನ್ನ ತಂದೆ ಯಾರೆಂದು ತೋರಿಸು ಎಂದು ಪರಿಪರಿಯಾಗಿ ಕಾಡಿಸುತ್ತಾನೆ. ಆಗ ಕಾಟ ತಾಳಲಾರದೆ ಎಲ್ಲಮ್ಮ ತಲೆಮರಿಸಿಕೊಳ್ಳುತ್ತಾಳೆ. ಮೀನಿನಲ್ಲಿ, ಹುಲಿಯಲ್ಲಿ, ಜೋಗವ್ವಳಾಗಿ, ಕಪ್ಪೆಯಾಗಿ, ಕೋಣವಾಗಿ ಎಲ್ಲಮ್ಮ ಅನೇಕ ರೀತಿಯಲ್ಲಿ ಬಚ್ಚಿಟ್ಟುಕೊಂಡರೂ ಸಹ ಪರಶುರಾಮ ಕಾಡುತ್ತಾನೆ. ಗಂಡ ಕೊಡಲಿಯಿಂದ ಕಾರ್ತಿಕ ರಾಜನನ್ನು ಸಂಹರಿಸುತ್ತಾನೆ. ಆಗ ಎಲ್ಲ ಶಾಪ ಪರಿಹಾರವಾಗಿ ಪರಶುರಾಮನಿಗೆ ತಂದೆಯ ಸಾಕ್ಷಾತ್ಕಾರ ಆಗುತ್ತದೆ. ಇಲ್ಲಿಗೆ ಮಂಗಳಾರತಿಯಿಂದ ಈ ಕಾವ್ಯ ಮುಕ್ತಾಯವಾಗುತ್ತದೆ.

ಹೀಗೆ ಇಡೀ ಕಾವ್ಯ ಸೊಗಸಾಗಿ ಹಿತವೆನಿಸುವ ಮತ್ತು ಬೇಜಾರಿಲ್ಲದೆ ಕಥೆ ನಿರೂಪಣಾ ಶೈಲಿಯು ಕೇಳುಗರಿಗೆ ಮುದವೆನಿಸುವಂತೆ ಸಾಗುತ್ತದೆ.

೪. **ಜಾನಪದ ಸಾಹಿತ್ಯ ದರ್ಶನ** ಸಂಪಾದಕರು ಡಾ. ಎಂ. ಎಂ. ಕಲಬುರ್ಗಿ ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. ಈ ಸಂಚಿಕೆಯಲ್ಲಿ ಮೂಡಿ ಬಂದಿರುವ ಎಲ್ಲಮ್ಮನ ಕುರಿತಾದ ಲೇಖನಗಳು ವಿವಿಧ ವಿದ್ವಾಂಸರಿಂದ ವಿಚಾರ ಸಂಕೀರ್ಣಗಳಲ್ಲಿ ಮಂಡಿಸಿದ ಲೇಖನಗಳ ಸಂಗ್ರಹಗಳಾಗಿವೆ.

ಈ ಪುಸ್ತಕದಲ್ಲಿ ಒಟ್ಟು ಹದಿಮೂರು ಲೇಖನಗಳ ಸಂಗ್ರಹವಿದ್ದು, ವಿವಿಧ ವಿದ್ವಾಂಸರ ಬರಹಗಳಲ್ಲಿ ಎಲ್ಲಮ್ಮನ ವಿಚಾರ ಮೂಡಿಬಂದಿದೆ. ಇಡೀ ಎಲ್ಲಮ್ಮನ ಜೀವನ ಚರಿತ್ರೆಯು ಯಾವ ರೀತಿಯಾಗಿ ವಿವಿಧ ಆಯಾಮಗಳಲ್ಲಿ ಸಾಗಿ ಬಂದಿದೆ ಎಂಬುದನ್ನು ಚಿತ್ರಿಸಲಾಗಿದೆ.

ಪ್ರೊ. ಸಿ. ಪಾರ್ವತಮ್ಮನವರು 'ಜಾನಪದ ಸಂಸ್ಕೃತಿ ದೇವದಾನವ ಸಮ್ಮಿಲನ ಏಳುಕೊಳ್ಳದ ಯಲ್ಲಮ್ಮ' ಈ ಲೇಖನದಲ್ಲಿ ಮಾನವ ಯಾವ ರೀತಿಯಾಗಿ ಪ್ರಕೃತಿಗೆ ಸೋತು ದೇವರ ಸ್ಥಾನವನ್ನು

ಅನಾದಿಕಾಲದಿಂದಲೂ ಕಲ್ಪಿಸುತ್ತಾ ಸಾಗಿದ್ದಾನೆ ಎಂಬುದು ಮತ್ತು ಮಾನವ ಪ್ರಕೃತಿಯೊಂದಿಗಿನ ವಿಶಿಷ್ಟ ಸಂಬಂಧ ಎಂಥದ್ದು, ದೇವರು, ಧರ್ಮ, ಮಾನವ ಸಂಬಂಧ, ಪ್ರಕೃತಿ ವಿಕೋಪ ಮತ್ತು ಮನುಷ್ಯ ತನ್ನಿಂದ ಅಸಾಧ್ಯವಾದ ಶಕ್ತಿಗೆ ಯಾವ ರೀತಿ ಸೋತು ದೇವರ ಸ್ಥಾನ ಕಲ್ಪಿಸುತ್ತಾನೆ. ಸಾಮಾಜಿಕ ವ್ಯವಸ್ಥೆಯಲ್ಲಿ ಪುರೋಹಿತ ವರ್ಗ ಬಿಗಿಮುಷ್ಟಿ ಶತಾಯುಗತಾಯ ಪ್ರಯತ್ನಿಸಿ ಒಡೆದು ಆಳುವ ನೀತಿ ರೂಪಿಸುವಿಕೆ, ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರ ಸ್ಥಾನಮಾನ ಕುರಿತು ಚಿಂತಿಸಿದ್ದಾರೆ. ಮುಂದುವರೆದು "ಪ್ರಸ್ತುತ ಸಂದರ್ಭದಲ್ಲಿ ಏಳುಕೊಳ್ಳದ ಎಲ್ಲಮ್ಮ ದೇವತೆಗಳನ್ನು ಒಂದು ಊರು ಅಥವಾ ಒಂದು ಸೀಮೆಯ ದೇವತೆಯಾಗಿ, ಕಾಲಕ್ರಮೇಣ ದಕ್ಷಿಣ ಭಾರತದ ನಾಲ್ಕಾರು ಪ್ರಾಂತಗಳಲ್ಲಿ ಪ್ರಚಾರ ಹೊಂದಿ, ಕೊನೆಯಲ್ಲಿ ರೇಣುಕೆಯಾಗಿ ಸಮಗ್ರ ಭಾರತದ ಬ್ರಾಹ್ಮಣ ಸಂಸ್ಕೃತಿಯಲ್ಲಿ ಲೀನವಾಗಿರುವುದು ಸ್ಪಷ್ಟವಾಗಿ ಎದ್ದು ಕಾಣುತ್ತದೆ" [೧] ಎಂದಿದ್ದಾರೆ. ಎಲ್ಲಮ್ಮನ ಶಕ್ತಿ ಊರು, ಗಡಿ, ಸೀಮೆ ದಾಟಿಕೊಂಡು, ವ್ಯಾಪ್ತಿ ಹಾಗೂ ಚಮತ್ಕಾರ ಸಾಮರ್ಥ್ಯಗಳು ಎಲ್ಲೆ ಮೀರಿ ಬೆಳೆದಿದೆ. ಎಲ್ಲಮ್ಮನ ಭಕ್ತರ ಹುಣ್ಣಿಮೆ ಜಾತ್ರೆಗೆ ಜನಜಂಗುಳಿಯ ಸವದತ್ತಿ ಕ್ಷೇತ್ರದಲ್ಲಿ ಕಾಣಬಹುದು. ಸ್ತ್ರೀಯರು, ದೊಡ್ಡವರು ಯಾವುದೇ ಬೇಧವಿಲ್ಲದೆ ಸೇರುತ್ತಾರೆ. ಒಟ್ಟಾರೆಯಾಗಿ ಈ ಲೇಖನ ಪ್ರಸ್ತುತ ಸಂದರ್ಭಕ್ಕೆ ಅನ್ವಯಿಸುವಂತೆ ಎಲ್ಲಮ್ಮನ ಆಚರಣೆ ಸಂಪ್ರದಾಯ ನಂಬಿಕೆಗಳ ಕುರಿತಾಗಿ ಸಮಗ್ರತೆಯಿಂದ ಮೂಡಿಬಂದಿದೆ.

'ಅ. ಸುಂದರ' ಅವರು **"ಸವದತ್ತಿ ಎಲ್ಲಮ್ಮ : ಚರಿತ್ರೆ ಮತ್ತು ಸ್ಥಳ ವಿವರ"** ಈ ಲೇಖನದಲ್ಲಿ ಸವದತ್ತಿ ಎಲ್ಲಮ್ಮನ ಕುರಿತಾಗಿ ಪೀಠಿಕೆಯಿಂದ ಆರಂಭವಾಗಿ ಪೌರಾಣಿಕ ಹಿನ್ನೆಲೆ, ಪುರಾತತ್ವ ಅವಶೇಷಗಳು, ಪ್ರಾಗೈತಿಹಾಸಿಕ ಅವಶೇಷಗಳು, ಇತಿಹಾಸ ಕಾಲದ ಅವಶೇಷಗಳು, ಶಾಸನ, ದೇವಾಲಯ ಮತ್ತು ಬಸದಿಗಳ ಸಮನ್ವಯತೆ ಮತ್ತು ಮಾರ್ಪಾಡುಗಳು, ರಟ್ಟರು ಮತ್ತು ಜಮದಗ್ನಿ, ರೇಣುಕಾ – ಪರಶುರಾಮ ಕಥಾಸಂಬಂಧ ಇತರ ಕೆಲವು ಸ್ಥಳಿಕ ಅಂಶಗಳು, ಗುಡಿಗಳ ನಿರ್ಮಾಣ, ಸ್ಥಳ ಪುರಾಣ, ಮೊದಲಾದ ಅನೇಕ ವಿಷಯಗಳ ಕುರಿತಾದ ಸಿಕ್ಕ ಸಾಕ್ಷ್ಯಾಧಾರಗಳ ಮೂಲಕ ನಿಖರವಾದ ಮಾಹಿತಿ ಒದಗಿಸಿಕೊಡಲು ಪ್ರಯತ್ನಸಿದ್ದಾರೆ.

ಎಂ. ಬಿ. ನೇಗಿನಾಳ **'ಎಲ್ಲಮ್ಮನ ಐತಿಹ್ಯಗಗಳು'** ವಿಷಯದಲ್ಲಿ ಎಲ್ಲಮ್ಮನ ವಿಚಾರ, ಎಕ್ಕಯ್ಯ-ಜೋಗಯ್ಯರ ವಿಚಾರ, ಎಲ್ಲಮ್ಮ ಸಿದ್ಧರ ಸಂಬಂಧಗಳು ಎಲ್ಲಮ್ಮ – ಮೈಲಾರಲಿಂಗಪ್ಪನ ಸಂಬಂಧ ಕುರಿತಾಗಿ ವಿಚಾರ ಮಂಡಿಸಿದ್ದಾರೆ.

ದೇವೇಂದ್ರಕುಮಾರ ಹಕಾರಿಯವರು **'ಎಲ್ಲಮ್ಮನನ್ನು ಕುರಿತು ಪೌರಾಣಿಕ ಸಂಗತಿಗಳು:** ಒಂದು ವಿವೇಚನೆ'ಯಲ್ಲಿ ಎಲ್ಲಮ್ಮನನ್ನು ಏಳುಕೊಳ್ಳದ ಎಲ್ಲಮ್ಮ ಎಂದೆ ಕರೆಯುವುದು ರೂಢಿ. ಏಳುಕೊಳ್ಳದೆಲ್ಲಮ್ಮಾ ನಿನ್ನಾಲಕ ಉಧೋ ಉಧೋ ಇದು ಭಕ್ತರ ಉದ್ಘೋಷ. ಎಲ್ಲಿಕಾಣೆಲ್ಲಿಕಾಣೆ ಎಲ್ಲಮ್ಮನಂಥಾಕೆಲ್ಲಿ ಕಾಣೆಲ್ಲಿ ಕಾಣೆ, ಹುಟ್ಟಿ ಬಂದೆ ನೀ ಎಲ್ಲಮ್ಮನಾಗಿ ನಿನ ಮದುವಿ ಮಾಡಿ ಕೊಟ್ಟಾರವ್ವ ಜಮದಗ್ನಿಗೆ ಇತ್ಯಾದಿ ಎಲ್ಲಮ್ಮನ ಮಹಿಮೆಯನ್ನು ಸಾರುವ ಜಾನಪದ ಹಾಡುಗಳು.

ಎಲ್ಲಮ್ಮನ ಕ್ಷೇತ್ರಕೆ ಸಂಬಂಧಿಸಿದ ಜನಪದ ಹಾಡುಗಳಲ್ಲಿ ಏಳುಕೊಳ್ಳ ಸಿದ್ಧನಕೊಳ್ಳ ಮುಂತಾದ ಮಾತು ಕೇಳಿಬರುತ್ತವೆ. ಸವದತ್ತಿ ಹತ್ತಿರದ ಈ ಪ್ರದೇಶದ ಭೌಗೋಳಿಕ ಪಾತಳಿ ಕೊಳ್ಳಗಳಿಂದ

ರೂಪುಗೊಂಡಿದ್ದು ಪುರಾತನ ಕಾಲದಿಂದ ಸಿದ್ಧ ಸಂತರ  ಸಾಧನೆಯ ಕ್ಷೇತ್ರವಾಗಿರಬೇಕು ಮತ್ತು ಈ ಪ್ರದೇಶದಲ್ಲೇ ಹುಟ್ಟಿ ಬೆಳೆದ ಎಲ್ಲಮ್ಮನಿಗೂ ಇಲ್ಲಿಯ ಏಳುಕೊಳ್ಳಗಳ ಸಂಬಂಧ ಇರಬೇಕು. ಎಲ್ಲಮ್ಮನ ಬಗೆಗೆ ಸಂಪೂರ್ಣ ಸುತ್ತಿ ಹಾಕಿಕೊಂಡಿರುವ ಪೌರಾಣಿಕ, ಐತಿಹಾಸಿಕ ಮತ್ತು ಜನಪದ ಕಥೆಗಳಲ್ಲಿ ಹುದುಗಿರುವ ಪವಾಡಗಳಲಿ ಅಡಗಿಕೊಂಡಿರುವ ಸಂಗತಿಗಳ ನಿಜರೂಪ ತಿಳಿಯಪಡಿಸಲು ಈ ಲೇಖನ ಒಂದು ಅವಶ್ಯಕವಾಗಿ ಮೂಡಿ ಬಂದಿದೆ.

**'ಎಲ್ಲಮ್ಮ  ಪ್ರಾದೇಶಿಕ ವ್ಯಾಪ್ತಿ ಮತ್ತು ಪ್ರಭಾವ'** ಆರ್. ಎಸ್. ಹಿರೇಮಠರು ಶಕ್ತಿಯ ಆರಾಧನೆ ಭರತಖಂಡದಲ್ಲಿ ಪುರಾತನವಾದುದು. ಆರಾಧನೆ ವಿವಿಧ ಕಡೆಗಳಲ್ಲಿ ನಾನಾ ರೀತಿಯಾಗಿ ನಡೆಯುತ್ತ ರೋಗರುಜಿನಗಳ ಪರಿಹಾರವಾಗಿ ಈ ಶಕ್ತಿಯನ್ನು ಕಾಳಿ, ಗುರ್ಗವ್ವ, ದ್ಯಾಮವ್ವ, ಉಚ್ಚೆಂಗೆಮ್ಮ ಮೊದಲಾದ ಹೆಸರುಗಳಿಂದ ಆರಾಧಿಸಿ ಅನುಕೂಲವಿದ್ದಾಗ ಹರಕೆ ಸಲ್ಲಿಸುವ ಸಾಂಪ್ರದಾಯ ಜಾನಪದರಲ್ಲಿದೆ.

ಉತ್ತರ ಕರ್ನಾಟಕದ ಬೆಳಗಾವಿ ಜೆಲ್ಲೆಯ ಸವದತ್ತಿ ತಾಲೂಕಿನ ಏಳುಕೊಳ್ಳದದಲ್ಲಿ ನೆಲೆಸಿರುವ ಶಕ್ತಿದೇವತೆ ಏಳುಕೊಳ್ಳದ ಎಲ್ಲಮ್ಮ. ಇಲ್ಲಿ ಬೋರೆಸಾಬಕೊಳ್ಳ ತಮ್ಮಣ್ಣನಕೊಳ್ಳ, ಸಿದ್ದರಕೊಳ್ಳ, ಸಂಗ್ಯಾನಕೊಳ್ಳ, ಪರಸಗಡಕೊಳ್ಳ, ಮಾವಿನಕೊಳ್ಳ ಎಂಬುದಾಗಿ ಏಳುಕೊಳ್ಳಗಳಿಗಿರುವುದರಿಂದ ಈಕೆಗೆ ಏಳುಕೊಳ್ಳದ ಎಲ್ಲಮ್ಮ ಎಂದು ಹೆಸರು. ಈ ದೇವಸ್ಥಾನದಲ್ಲಿ ಚಿಕ್ಕ ದೊಡ್ಡ ಸೇರಿ ಒಟ್ಟು ೧೬೩ ದೇವತೆಗಳಿವೆ.

ಇಡೀ ಕರ್ನಾಟಕಾದ್ಯಂತ ಎಲ್ಲಮ್ಮನ ಆರಾಧಕರು, ದೇವಸ್ಥಾನಗಳು, ಭಕ್ತರು, ಜೋಗಪ್ಪ-ಜೋಗವ್ವಗಳು, ವ್ಯಭಿಚಾರಿ ವೃತ್ತಿಗಳ  ಜನರು ಕಷ್ಟ ನಿವಾರೆಣೆಗೆಂದು ಈ ದೇವಿಯ ಆರಾಧಕರಾಗಿರುವುದು ಕಾಣಬಹುದಾಗಿದೆ.

ವಿರೂಪಾಕ್ಷ ಬಡಿಗೇರ **'ಎಲ್ಲಮ್ಮನ ಜಾತ್ರೆ ಮತ್ತು ಪೂಜೆ'** ಈ ವಿಚಾರದಲ್ಲಿ ಕರ್ನಾಟಕದಲ್ಲಿ ಜಾತ್ರೆ, ರಥೋತ್ಸವಗಳ ವೈಭವಗಳಲ್ಲಿ ಕಲಬುರ್ಗಿ ಶರಣಬಸವೇಶ್ವರ, ಮೈಲಾರಲಿಂಗ, ಸಿರಸಿ ಮಾರಿಕಾಂಬೆ, ಬಾದಾಮಿ ಬನಶಂಕರಿ ಮೊದಲಾದ ಅನೇಕ ಜಾತ್ರೆಗಳಂತೆ ಎಲ್ಲಮ್ಮನ ಜಾತ್ರೆಯೂ ಸಹ ತುಂಬಾ ವಿಜೃಂಭಣೆಯಿಂದ ಜರುಗುತ್ತದೆ. ಈ ಜಾತ್ರೆಯಲ್ಲಿ ಯಾವ ಜಾತಿ ಮತ ಪಂಥಗಳ ನಿರ್ಬಂಧವಿಲ್ಲದೆ ನಡೆಯುತ್ತದೆ. ಎಲ್ಲಮ್ಮನ ಜಾತ್ರೆ ಸವದತ್ತಿ ಮಾತ್ರವಲ್ಲದೆ ಈರಂಗಲ್ಲ, ಆದವಾನಿ, ಮಾವೂರು, ಹುಲಿಗೆ, ಉಚ್ಚಂಗಿ, ಮೆಕಳಿ, ಬಂಕಾಪುರ, ನಾಗಾವಿ, ಚಾಕಲಬ್ಬಿ, ಮತ್ತಿಗಟ್ಟಿ, ಕೊಕಟಕದನೂರು, ಚಂದ್ರಗುತ್ತಿ, ಗುನ್ನಾಗೆರೆ ಬಿಂಕದಕಟ್ಟೆ ಕರ್ನಾಟಕದ ಮುಂತಾದ ಕಡೆಗಳಲ್ಲಿ ವೈಭವದಿಂದ ಜರುಗುತ್ತವೆ,

ಸವದತ್ತಿ ಎಲ್ಲಮ್ಮನ ಜಾತ್ರೆಗೆ ಬನದ ಹುಣ್ಣಿಮೆಗೆ ವಿಶೇಷವಾಗಿ ಬೆಳಗಾವಿ, ಕೊಲ್ಲಾಪುರ, ಮುಂಬೈಗಳಿಂದ ಜನರು ಬರುವರು. ಆಗ ಇಲ್ಲಿ ಬಹುದೊಡ್ಡ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಸುಮಾರು ೩-೪ ಲಕ್ಷ ಜನ ಸೇರುವರು. ತಮ್ಮ ಹರಕೆ, ಪೂಜೆ ವಿಶೇಷವಾಗಿ ಸಲ್ಲಿಸಿ ಮಾನಸಿಕ ನೆಮ್ಮದಿ ಪಡೆಯುತ್ತಾರೆ.

ಎಲ್ಲಮ್ಮನ ಜಾತ್ರೆಯ ವಿಶಿಷ್ಟತೆಗಳ ಕುರಿತಾಗಿ ಉಡುಗೆ ಉಡಿಸುವುದು, ಪಲ್ಲಕ್ಕಿ ಸೇವೆ, ಬೆತ್ತಲೆ

ಸೇವೆ, ದೇವಿಯನ್ನು ಮಾತನಾಡಿಸಲು ಬರುವುದು, ದೇವಿಯನ್ನು ಒಳಗೆ ಕರೆದುಕೊಳ್ಳುವುದು, ಮಹಾನೈವೇದ್ಯ, ಹೆಡಿಗೆ ಒಯ್ಯುವುದು, ಕಂಕಣ ಮಂಗಳೋತ್ಸವ , ಪ್ರಸಾದ ವ್ಯವಸ್ಥೆ, ದೇವಿಗೆ ಹಾಸಿಗೆ ಸೇವೆ ಮೊದಲಾದ ಅನೇಕ ರೀತಿಯ ಭಕ್ತರ ನಂಬಿಕೆ ಮತ್ತು ಇಷ್ಟಾರ್ಥಗಳ ಸಿದ್ಧಿಕಾರ್ಯ ಅಥವಾ ಆಚರಣೆಗಳ ಕುರಿತಾಗಿ ವಿವರಿಸಿದ್ದಾರೆ.

ಎನ್. ಕೆ. ಕಡೆತೋಟದ ಅವರು **'ಜೋಗಪ್ಪ – ಜೋಗವ್ವ – ಭಕ್ತರು'** ಈ ಲೇಖನವು ಜೋಗಪ್ಪ ಎಂದು ಕರೆಸಿಕೊಳ್ಳುವವರು ಹೆಂಗಸರ ವೇಷದಲ್ಲಿರುವ ಗಂಡಸರು. ಜೋಗಪ್ಪ ಮತ್ತು ಜೋಗವ್ವಗಳ ಸಂಪ್ರದಾಯ ಎಲ್ಲಮ್ಮ ರೇಣುಕಾ ಅಥವಾ ಏಕವೀರಾ ಎಂಬ ಪೌರಾಣಿಕ ಸ್ತ್ರೀಯ ಕಥೆಯ ಮೇಲೆ ಬೆಳೆದಿದೆ.

ಅರವಿಂದ ಮಾಲಗತ್ತಿಯವರು **'ಎಲ್ಲಮ್ಮನ ವಿಶಿಷ್ಟ ಹರಕೆಗಳು ಮತ್ತು ನಂಬಿಕೆಗಳು'** ಈ ಲೇಖನದಲ್ಲಿ ನಿಸರ್ಗದೊಂದಿಗೆ ಮಾನವನ ದ್ವಂದ್ವ ಅವ್ಯಾಹತವಾಗಿ ನಡೆದುಕೊಂಡು ಬಂದಿದೆ. ಒಂದೊಂದು ನೈಸರ್ಗಿಕ ವಿಘ್ನಗಳು ಭುತಾಕಾರವಾಗಿ ಕಣ್ಣ ಮುಂದೆ ತಾಂಡವ ನೃತ್ಯಗೈಯುವಾಗ ಪ್ರಖರವಾದ ಆ ನಿಸರ್ಗ ಶಕ್ತಿಗೆ ಆದಿಮಾನವ ಮೊರೆ ಹೊಕ್ಕಿರಬೇಕು. ಅನಂತರದಲ್ಲಿ ಆರಾಧನಾ ಸ್ವರೂಪ ಮೊಳಕೆಯೊಡೆದು, ಸಮಸ್ಯೆಗಳ ನಿವಾರಣೆ ನಂಬಿಕೆ, ಹರಕೆ, ಆಚರಣೆ ಮುಂತಾದವುಗಳು ಬೆಳೆದು ಬಂದಿರಬೇಕು. ಆರೋಗ್ಯ, ರಕ್ಷಣೆ ಮನುಷ್ಯನ ಪ್ರಪ್ರಥಮ ಪ್ರಯತ್ನಗಳಲ್ಲೊಂದಾಗಿರಬೇಕು. ಆದ್ದರಿಂದ ಮನುಷ್ಯನ ವ್ಯವಸಾಯದ ಕಡೆ ಗಮನ ಹರಿಸುವ ಮೊದಲೇ ದೇಹಕ್ಷೇಮ ಸಾಧಕವಾದ ವಿಷಯಗಳನ್ನು ಕಂಡುಹಿಡಿಯಲು ಅವನು ತನ್ನ ಬುದ್ಧಿಯನ್ನು ಬಳಸಿಕೊಂಡಿರಬೇಕು ಎಂಬುದನ್ನು ಚರ್ಚಿಸಿದ್ದಾರೆ.

**'ಎಲ್ಲಮ್ಮನ ಹಾಡು, ವಾದ್ಯ, ಕುಣಿತ'**ದಲ್ಲಿ ವೀರಣ್ಣ ದಂಡೆಯವರು ಶಿಷ್ಟ ಸಾಹಿತ್ಯ ಮತ್ತು ಶಿಷ್ಟ ಸಂಗೀತಗಳು ಪ್ರತ್ಯೇಕ ಪ್ರತ್ಯೇಕವಾಗಿ ಪ್ರಯೋಗವಾಗುವಂತಹವು. ಜನಪದ ಕಾವ್ಯದಂತೆ ಒಂದು ವಿಶೀಷ್ಟ ಸಾಂಸ್ಕೃತಿಕ ಪರಿಸರದಲ್ಲೇ ಬಳಕೆಯಾಗುವ ಅನಿವಾರ್ಯತೆ ಅವುಗಳಿಗಿಲ್ಲ. ಹೀಗಾಗಿ ಅವು ಜಾನಪದ ಸಂಗೀತ ಮತ್ತು ಕಾವ್ಯಕ್ಕಿಂತ ತೀರ ಶಾಸ್ತ್ರಿಯವಾಗಿ ಬೆಳೆದುಕೊಂಡು ಬರಲು ಸಾಧ್ಯವಾಗಿದೆ. ಆದರೆ ಜನಪದ ಕಾವ್ಯ ಒಂದೇ ಕಾಲಕ್ಕೆ ಹಲವಾರು ಅಂಶಗಳನ್ನು ಹೊರಹಾಕುವ ಒಂದು ಸಮ್ಮಿಶ್ರ ಕಲೆಗಾಗಿ ಬಳಕೆಯಲ್ಲಿದೆ. ಅದಕ್ಕಾಗಿ ಶಿಷ್ಟ ಸಾಹಿತ್ಯ ಹಾಗೂ ಶಿಷ್ಟ ಸಂಗೀತಗಳೊಂದಿಗೆ ಜನಪದ ಸಾಹಿತ್ಯ ಮತ್ತು ಜನಪದ ಸಂಗೀತಗಳನ್ನು ಹೋಲಿಸಿ ಮಾರ್ಗ ಕಲೆಗಳನ್ನು ಉನ್ನತವೆಂದು ನಿರ್ಣಯಿಸುವ ಹುಚ್ಚು ಹವ್ಯಾಸಕ್ಕೆ ಕೈ ಹಾಕುವುದು ಉಚಿತವೆಂಬುದನ್ನು ಚರ್ಚಿಸಿದ್ದಾರೆ.

"ಚೌಡಿಕೆ ಸಂಪ್ರದಾಯದಲ್ಲಿ ಎಲ್ಲಮ್ಮನ ಚರಿತ್ರೆ ಹಾಗೂ ಅನೇಕ ಬಗೆಯ ಕಥನಕವನಗಳನ್ನು ಹಾಡುವ ದಾಟಿಗಳು ಮೇಲು ನೋಟಕ್ಕೆ ರಂಜನೀಯವೆನಿಸಿದರೂ, ಅವು ಮನಸ್ಸಿನ ಆಳದಲ್ಲಿ ತೀರ ಗಂಭೀರವಾದ ಭಯ, ಭಕ್ತಿ ಭಾವವನ್ನು ಉದ್ದೀಪನಗೊಳಿಸುವ ದಾಟಿಗಳಾಗಿವೆ"[೨] ಎಲ್ಲಮ್ಮನ ಬಗೆಗಿನ ಜನಪದರ ನಂಬಿಕೆ, ಭಯ, ಭಕ್ತಿ, ಕಲ್ಪನೆಗಳು ಈ ಕಾವ್ಯ ಹಾಡುವವರ ರೋಧನೆ ಒಂಟಿತನ ಕಾಣುತ್ತೇವೆ.

ಹೆಚ್ಚಾಗಿ ಹೆಂಗಸರೇ ಈ ಗಾಯನ ಮಾಡುತ್ತಾರೆ. ಈ ಕಾವ್ಯವು ಖ್ಯಾಲಗಳಂತೆ ತೀವ್ರ ಲಯದೊಂದಿಗೆ ಆರಂಭವಾಗಿ ಧೃತಲಯದೊಂದಿಗೆ ಕೊನೆಗೊಳ್ಳುತ್ತದೆ. ಬಾರ್ಕಿ ಚೌಡಿಕೆಯ ಗತ್ತು, ಡಪ್ಪಿನ ರೀತಿಯ ಗೀಗೀ ಹಾಡುಗಳಂತೆ ಅಂಕುರಿಸುತ್ತದೆ. ಚೌಡಿಕೆ ಸಂಪ್ರದಾಯದ ಹಾಡುಗಳು ಕಥನಕವನಗಳು ಎಲ್ಲಮ್ಮ ಸ್ತುತಿ, ಚರಿತ್ರೆ, ಇತರ ಕಥೆಗಳನ್ನು ಹಾಡಲಾಗುತ್ತದೆ.

**'ವಿವಿಧ ಸಂಸ್ಕೃತಿಗಳಲ್ಲಿ ದೇವದಾಸಿ ಸಂಪ್ರದಾಯ'** – ಪ್ರಭಾ ಮಹಾಲೆಯವರು ಸೊಗಸಾಗಿ ದೇವದಾಸಿ ಪದ್ಧತಿ ಕುರಿತು ಚಿಂತಿಸಿದ್ದಾರೆ.

"ಸಾಕಷ್ಟು ಚರ್ಚೆಗೆ ಒಳಗಾಗಿರುವ ದೇವದಾಸಿ ಸಂಪ್ರದಾಯ ಭಾರತೀಯ ಸಂಸ್ಕೃತಿಗೆ ಮಾತ್ರ ವಿಶಿಷ್ಟವಾಗಿರದೆ, ಇತರ ಸಂಸ್ಕೃತಿಗಳಲ್ಲಿಯೂ ಕಾಣಸಿಗುತ್ತದೆ"[೩] ವಿವಿಧ ಸಂಸ್ಕೃತಿ ಮತ್ತು ಭಾರತೀಯ ವಿಭಿನ್ನ ಪ್ರದೇಶಗಳಲ್ಲಿ ಇದರ ಆಚರಣೆಯ ಮುಖಾಂತರ ಇದರ ಉಗಮವನ್ನು ಸ್ಥೂಲವಾಗಿ ವಿವರಿಸಿದ್ದಾರೆ. ಈ ಪ್ರಬಂಧದಲ್ಲಿ ದೇವದಾಸಿ ಪದ್ಧತಿ, ದೇವರಿಗೆ ದಾಸರಾಗಿ ಸೇವೆ ಸಲ್ಲಿಸಲು ಹೆಣ್ಣು–ಗಂಡು ಇಬ್ಬರನ್ನು ಬಿಡುವುದು ಬಹು ಪ್ರಾಚೀನವಾದುದು.

"ಹೈರೋಡೌಲೊಯಿ' (ಪವಿತ್ರ ಸೇವಕರು' ಹಿಯರೊಯ ದೇವಾಲಯ ಅರ್ಚಕ (ದೇವರಿಗೆ ಮೀಸಲಾದ ಹೆಣ್ಣು) ಕೋಸಿಯೊ (ದೇವರ ನಿಕಟ ಸಂಪರ್ಕದ ವ್ಯಕ್ತಿಗಳು)"[೪] ಮುಂತಾದ ಶಬ್ಧಗಳು ಈ ಮಾದರಿಯ ಕಾಲದಿಂದ ಅಸ್ತಿತ್ವದಲ್ಲಿದುದ್ದನ್ನು ಕಾಣಬಹುದಾಗಿದೆ.

**'ಎಲ್ಲಮ್ಮನ ದೇವದಾಸಿ ಸಂಪ್ರದಾಯಯದ ಪರಿಣಾಮಗಳು'** ಎಂಬ ವಿಚಾರವಾಗಿ ಹನುಮಾಕ್ಷಿ ಗೋಗಿಯವರು ದೇವದಾಸಿ ಪದ್ಧತಿಯಿಂದುಂಟಾಗುವಂತಹ ಪರಿಣಾಮಗಳ ಬಗೆ ಸೊಗಸಾಗಿ ಚಿತ್ರಿಸಿ "ಮುತ್ತು ಹೊತ್ತವರು"[೫] ಎಂಬ ಕಲ್ಪನೆಯಲ್ಲಿ ಹನುಮಾಕ್ಷಿ ಗೋಗಿ ಅವರು ಚರ್ಚಿಸಿದ್ದಾರೆ.

ದೇವದಾಸಿ ಪದ್ಧತಿಯ ಆಚರಣೆಯ ಫಲವಾಗಿ ಅನೇಕ ಧಾರ್ಮಿಕ, ಸಾಮಾಜಿಕ, ದೈಹಿಕ, ಮಾನಸಿಕ, ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಪರಿಣಾಮಗಳು ಸಮಾಜದ ವ್ಯವಸ್ಥೆಯ ಬಗ್ಗೆ ಈ ಲೇಖನ ಚಿತ್ರಿಸುತ್ತದೆ.

**'ದೇವದಾಸಿ ಸಂಪ್ರದಾಯದ ಪ್ರೇರಣೆಗಳು'** ಎಂಬ ವಿಷಯವನ್ನು ಎಂ.ಬಿ. ಸಂಕೇತರು ತಮ್ಮ ಅಭಿಪ್ರಾಯ ಸಾಕ್ಷ್ಯಾಧಾರಗಳ ಮೂಲಕ ಕಟ್ಟಿಕೊಡುತ್ತಾರೆ.

**'ಗ್ರಾಮದೇವತೆ – ಗ್ರಾಮ್ಯದೇವತೆಗಳು'** ಎಂಬ ವಿಷಯವನ್ನು ಎಂ. ಚಿದಾನಂದಮೂರ್ತಿಗಳು ಏಳುಕೊಳ್ಳದ ಎಲ್ಲಮ್ಮನನ್ನು ಕೇಂದ್ರ ವಸ್ತವಾಗಿಟ್ಟುಕೊಂಡು ಎಲ್ಲಮ್ಮನ ಇತಿಹಾಸ, ಜನರ ಆ ದೈವದ ಮೇಲೆ ಬೀರಿದ ಪರಿಣಾಮಗಳನ್ನು ಚರ್ಚಿಸಿದ್ದಾರೆ.

**ಗ್ರಾಮ್ಯ ದೇವತೆಗಳ ಸಾಮಾನ್ಯ ಲಕ್ಷಣಗಳು**

* ಗ್ರಾಮ್ಯ ದೇವತೆಗಳು ಬಹುತೇಕವಾಗಿ ಸ್ತ್ರೀ ದೇವತೆಗಳಾಗಿ ಕಂಡು ಬರುತ್ತವೆ.

* ಬಹುತೇಕ ಗ್ರಾಮ್ಯ ದೇವತೆ ಸ್ತ್ರೀ ದೇವತೆಯಾಗಿದ್ದು ಪಾರ್ವತಿಯ ಸ್ವರೂಪಿಣಿ, ಶಕ್ತಿ ಆರಾಧಕಿ, ದುಷ್ಟರ ಸಂಹಾರಿಣಿ ದುಗಿ, ಕಾಳಿ, ಮಾರಿ, ಚೌಡಿ, ಚಂಡಿ, ಚಾಮುಂಡಿ ಮೊದಲಾದ ಹೆಸರುಗಳಿಂದ ಕರೆಸಿಕೊಂಡಿದ್ದಾರೆ.

* ಗ್ರಾಮ್ಯ ಸ್ತ್ರೀ ದೇವತೆಗೆ ವಿವಾಹವಾಗಿದ್ದು ಬಹುತೇಕ ಗಂಡ ಸತ್ತು ರಂಡೆಯಾಗಿ ಕಾಣಿಸಿಕೊಳ್ಳುತ್ತಾಳೆ.

* ಶಿಷ್ಟ ದೇವತೆಗಳಿಗೆ ಹೊಗಳಿದರೆ ಸಂತೋಷವಾದರೆ, ಗ್ರಾಮ್ಯ ದೇವತೆಗಳು ಅಶ್ಲೀಲ ಬೈಗುಳಗಳು ಬಹಳ ಪ್ರೀತಿ ತೋರುತ್ತವೆ.

* ಶಿಷ್ಟ ದೇವರುಗಳು ಸಸ್ಯಹಾರವಾದರೆ, ಗ್ರಾಮ್ಯದೇವರಿಗೆ ಮಾಂಸಹಾರ ಅರ್ಪಿಸಲಾಗುತ್ತದೆ.

* ಗ್ರಾಮ್ಯ ದೇವತೆಗೆ ಮದ್ಯ, ಮಾಂಸ, ಬೆತ್ತಲೆಸೇವೆ, ಬೇವಿನುಡುಗೆಯಿಂದ ತೃಪ್ತಿ ದೊರೆಯುತ್ತದೆ.

* ಗ್ರಾಮ್ಯ ದೇವತೆಯ ಬಗ್ಗೆ ಭಕ್ತಿ, ಪ್ರೀತಿಗಳಿಗಿಂತ ಹೆಚ್ಚು ಭಯ ಕಂಡುಬರುತ್ತದೆ. ಮೊದಲಾದ ಅನೇಕ ವಿಷಯಗಳ ಕುರಿತು ಈ ಲೇಖನ ತಿಳಿಸುತ್ತದೆ.

**೫. ಶ್ರೀ ರೇಣುಕಾ ಮಹಾತ್ಮೆ : ಯ. ಗು. ಕುಲಕರ್ಣಿ**

ಈ ಕತೆಯಲ್ಲಿ ಯ.ಗು ಕುಲಕರ್ಣಿಯವರು ಸುಪ್ರಸಿದ್ಧ ಸವದತ್ತಿ ಕ್ಷೇತ್ರದ ಎಲ್ಲಮ್ಮನ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಶ್ರೀ ದೇವಿಯ ಭಕ್ತಾದಿಗಳಿಗೆ ಮತ್ತು ಕನ್ನಡಿಗರಿಗೆ ಈ ದಿವ್ಯ ಚರಿತ್ರೆಯ ವಾಚನದಿಂದ ಲಾಭವು ದೊರೆಕಿಸಿ ಕೊಡುವುದು, ಇದರಲ್ಲಿ ಎಲ್ಲಮ್ಮನ ಜನ್ಮಕತೆ, ಆಕೆಯ ಉಪಾಸನಾಮಹಿಮೆ, ರಾಮಶೃಂಗದ ಮಹತ್ವ, ಎಣ್ಣೆಗೊಂಡದ ಉತ್ಪತ್ತಿ ಮೊದಲಾದ ವಿಷಯಗಳು ವಿವರಿಸಲ್ಪಟ್ಟಿರುವವು.

ಈ ಕೃತಿಯಲ್ಲಿ ಶ್ರೀ ರೇಣುಕಾ ದೇವಿಯ ಕಥೆಯು ಗೌತಮ ಮುನಿಗಳ ದರ್ಶನದ ಮುಲಕ ಪ್ರಾರಂಭವಾಗುತ್ತದೆ. ದೇವಿಯ ಸಂಕ್ಷಿಪ್ತ ವೃತ್ತಾಂತ, ಪೂಜಾ ವಿಧಿ-ವಿಧಾನಗಳು ವಿವಾಹ, ಪರಶುರಾಮನ ಜನ್ಮ ರೇಣುಕೆಗೆ ಜಮದಗ್ನಿಯು ಶಾಪ ವಿಧಿಸಿದ್ದು, ಎಲ್ಲಮ್ಮನ ಜೀವನ ವೃತ್ತಾಂತಗಳು ಮತ್ತು ಜೋಗತಿಯರಿಗೆ ದೀಕ್ಷೆ ನೀಡುವಿಕೆ, ಜೋಗತಿಯರ ಉಡುಪುಗಳು, ರೀತಿ-ನೀತಿಗಳು, ವೇಶ್ಯಾವೃತ್ತಿಯನ್ನು ಆಚರಿಸುವ ಎಷ್ಟೋ ಜನ ಜೋಗತಿಯರು ಮತ್ತು ದೇವದಾಸಿಯರು ಎಲ್ಲಮ್ಮ ದೇವಸ್ಥಾನಕ್ಕೆ ನಡೆಯುತ್ತಿರುವ ಸಂಗತಿಗಳನ್ನು ವಿವರಿಸಿದ್ದಾರೆ. "ಎಲ್ಲಮ್ಮನ ಸಂಪ್ರದಾಯವು ಕರ್ನಾಟಕದ ಅನೇಕ ಕಡೆಗಳಲ್ಲಿ ಕಾಣಸಿಗುತ್ತವೆ. ಅವು ೧) ಮಾವರದೆಲ್ಲಮ್ಮ ೨) ಓರಂಗಟೆಲ್ಲಮ್ಮ ೩) ಆದವಾನಿ ಎಲ್ಲಮ್ಮ ೪) ಉಚ್ಚಂಗಿ ಎಲ್ಲಮ್ಮ ೫) ಮಳಿಯಮ್ಮ ೬) ಹುಲಗಿ ಹುಸೂರಿಯಮ್ಮ"[೬]

ಈ ಎಲ್ಲಾ ರಿತಿಯ ದೇವಿಯರು ರೇಣುಕೆಯ ಒಡಹುಟ್ಟಿದವರು ಎಂಬ ಪ್ರತೀತಿಯಿದೆ. ಎಲ್ಲಮ್ಮ ಕನ್ನಡ ನಾಡಿನಲ್ಲಿ ಅವಳು ಎಲ್ಲರ ಅಮ್ಮ, ಜಗದ ಅಂಬೆ, ಜಗತ್ತಿನ ಮಹಾತಾಯಿ ಎಂದೆಲ್ಲಾ ನಂಬಿಕೆಗೆ ಪಾತ್ರವಾಗಿ ಸ್ತ್ರೀ ಶಕ್ತಿಯ ಮಾತೃಪ್ರಧಾನತೆಯ ಅಂಶಗಳೇ ಈ ದೇವಿ ಚರಿತ್ರೆಯ ಮುಖ್ಯ ತಿರುಳಾಗಿದೆ.

## ೬. ಹುಲಿಗೆಮ್ಮ : ಡಾ ಪುರುಷೋತ್ತಮ ಬಿಳಿಮಲೆ

ಕರ್ನಾಟಕದ ಸುಪ್ರಸಿದ್ಧ ಜಾತ್ರೆಗಳಾಗಿ ಹೂವಿನಹಡಗಲಿಯ ಮೈಲಾರನ ಜಾತ್ರೆ, ಸವದತ್ತಿ ಎಲ್ಲಮ್ಮನ ಜಾತ್ರೆ ಮತ್ತು ಹುಲಗಿಯ ಹುಲಿಗೆಮ್ಮನ ಜಾತ್ರೆ ಈ ಮೂರು ಜಾತ್ರೆಗಳಲ್ಲಿ ಲಕ್ಷಾಂತರ ಭಕ್ತರು ಸಾವಿರಾರು ಬಗೆಯ ಕ್ರಿಯಾವಿಧಿಗಳು ನೆರವೇರಿಸುತ್ತಾರೆ. ಈ ಜಾತ್ರೆಗಳು ಸುದೀರ್ಘವಾದ ಚರಿತ್ರೆ ಮತ್ತು ವರ್ತಮಾನದ ಸಮ್ಮಿಶ್ರಣವಾಗಿ ನಡೆಯುವುದು ನಮ್ಮ ಸಾಂಸ್ಕೃತಿಕ ತಿಳುವಳಿಕೆಗೆ ಈ ಜಾತ್ರೆಗಳು ಬಹುದೊಡ್ಡದಾದ ಸವಾಲೆಸೆದಿವೆ.

ಹುಲಿಗಿ ಕ್ಷೇತ್ರದ ಹುಲಿಗೆಮ್ಮದೇವಿಯ ಕ್ಷೇತ್ರವು ಒಂದು ಸಮತಟ್ಟಾದ ಪ್ರದೇಶವಾಗಿದ್ದು ತುಂಗಭದ್ರಾ ನದಿಯ ದಂಡೆಯಲ್ಲಿದೆ. ಸುಮಾರು ಕ್ರಿಶ ೧೨ನೇ ಶತಮಾನದಲ್ಲಿಯೆ ಹುಲಿಗಿ ಕ್ಷೇತ್ರದಲ್ಲಿ ವ್ಯವಸಾಯ ಚನ್ನಾಗಿ ನಡೆಯುತ್ತಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿ ಹುಲಿಗೆಯಲ್ಲಿರುವ ಸೋಮೇಶ್ವರ ದೇವಸ್ಥಾನದಲ್ಲಿರುವ ಶಾಸನವೇ ಸಾಕ್ಷಿಯಾಗಿದೆ.

"ಹೊಸೂರಮ್ಮ – ಹುಲಿಗೆಮ್ಮಂದಿರೇ ಈ ಪ್ರದೇಶದ ದೈವಗಳು. ಕೃಷಿಕರು ಈ ದೈವಗಳ ಮುಖ್ಯ ಭಕ್ತರಾಗಿದ್ದಾರೆ" [೭]

ಹುಲಿಗೆಮ್ಮ ಈ ಕೃತಿಯಲ್ಲಿ ಡಾ. ಪುರುಷೋತ್ತಮ ಬಿಳಿಮಲೆಯವರು ಹುಲಿಗಿ ಕ್ಷೇತ್ರದ ಭೌಗೋಳಿಕ ವಿವರಗಳು ಐತಿಹ್ಯಗಳು, ಪವಾಡಗಳು ಮತ್ತು ಐತಿಹಾಸಿಕ ದಾಖಲೆಗಳು ಹಾಗೂ ಪೌರಾಣಿಕ ಜಾನಪದ ಹಿನ್ನಲೆಯಲ್ಲಿ ಹುಲಿಗೆಮ್ಮನ ಸಂಪ್ರದಾಯಗಳನ್ನು ಚಿತ್ರಿಸಿದ್ದಾರೆ.

ಈ ಲೇಖನದಲ್ಲಿ ಹುಲಿಗೆಮ್ಮ ಹುಲಿಗಿಯಲ್ಲಿ ನೆಲೆ ಊರಲು ಕಾರಣ, ನಾಥ ಸಂಪ್ರದಾಯ, ಸಿದ್ಧ ಸಂಪ್ರದಾಯ, ಸುಡುಗಾಡು ಸಿದ್ಧರು, ಪೂಜಾರಿಗಳ ಮಡಿ ಮೈಲಿಗೆ ಪದ್ಧತಿಗಳನ್ನು ಚರ್ಚಿಸಿದ್ದಾರೆ.

ಹುಲಿಗೆಮ್ಮ ಸೇವೆಗಳು – ದಿನಪೂಜೆ, ಪಲ್ಲಕ್ಕಿ ಸೇವೆ, ಬೆತ್ತಲೆಸೇವೆ, ಮಾತಾಡಿಸುವುದು, ಪಡಲಿಗೆ ಸೇವೆ, ಸೇವಾಭಾಗಿಗಳು ವಿವರಗಳು ಪ್ರಸ್ತುತ ಸಾಮಾಜಿಕ ನಿಕೃಷ್ಟ ಪದ್ಧತಿಗಳ ಚಿತ್ರಣ ಅಮಾನವಿಯತೆಯ ಮೌಢ್ಯ ಸಾಮಾಜಿಕ ಸ್ಥಿತಿಗಳು ವ್ಯಕ್ತವಾಗಿವೆ.

ರಂಡಿ ಹುಣ್ಣಿಮೆ – ಮುತ್ತೈದೆ ಹುಣ್ಣಿಮೆ, ಜಾತ್ರೆ ಕಂಕಣ ಕಟ್ಟುವಿಕೆ ರಥೋತ್ಸವ ಉತ್ಸವಗಳು ಸಾಮಾಜಿಕ ಆಚರಣೆಗಳು ಮಾನವನ ಸಂಘಜೀವನ ಚಿತ್ರಣ ಮನಸೂರೆಗೊಳ್ಳುತ್ತದೆ.

ದೇವಿಯ ಹೆಸರಿನಲ್ಲಿ ಮುತ್ತು ಕಟ್ಟುವುದು, ಜಗ–ಕೊಡ ಗುಗ್ರಿ ಮುಟಿಗಿ, ದೇವದಾಸಿ ಪದ್ಧತಿಯ ಆಚರಣೆಗಳು ಪುರುಷ ಪ್ರಧಾನ ವ್ಯವಸ್ಥೆಯ ಪುರೋಹಿತಶಾಹಿ ವ್ಯವಸ್ಥೆಯ ಪರವಾದ ಪರವಾದ ಆಚರಣೆ, ಅನಕ್ಷರಸ್ಥರ, ಶ್ರಮಿಕರ, ತುಳಿತಕ್ಕೆ ಒಳಗಾದವರ ಮತ್ತು ಕೆಳಸ್ಥರದ ಸಮುದಾಯದವರ ಸ್ಥಿತಿಗತಿಗಳ ಚಿತ್ರಣವು ಇಲ್ಲಿ ನಿರೂಪಿಸಲಾಗಿದೆ.

ದೇವಿಗೆ ಹರಕೆಗಳ ಸಲ್ಲಿಸುವಿಕೆಯ ಕಲ್ಪನೆಯು ರೋಗ ಚಿಕಿತ್ಸೆಯ ಪರಿಹಾರಕಗಳಾಗಿ ಜನರಲ್ಲಿನ

ನಂಬಿಕೆಗಳು ಪ್ರಸ್ತುತತೆಯ ಸ್ಥಿತಿಗಳನ್ನು ತಿಳಿಯಬಹುದಾಗಿದೆ.

ಈ ಮೊದಲಾದ ಅನೇಖ ಕ್ರಿಯಾ-ವಿಧಿಗಳಿಂದಾಗಿ ಸಾಮಾಜಿಕ ಸ್ಥಿತಿಗತಿಗಳು ಪ್ರಭುತ್ವದ ಹಾದಿಯಲ್ಲಿ ಸಾಮಾಜಿಕ ನಿಯಂತ್ರಣದ ಕಾರ್ಯಗಳನ್ನು ಮಾಡುತ್ತಿರುವ ಸಮುದಾಯಗಳ ಚಿತ್ರಣ ಈ ಕೃತಿಯಲ್ಲಿ ಚಿತ್ರಿಸಲಾಗಿದೆ.

**೭. ಹುಲಿಗೆಮ್ಮ : ಕೃಷ್ಣವೇಣಿ ಆರ್**

ಈ ಕೃತಿಯನ್ನು ಕೃಷ್ಣವೇಣಿ ಆರ್ ತಮ್ಮ ಪಿಹೆಚ್‌ಡಿ ಪದವಿಗಾಗಿ ಸಲ್ಲಿಸಿದ ಪ್ರಬಂಧವಾಗಿದ್ದು ಹುಲಿಗೆಮ್ಮ ದೇವಿಯ ಕ್ಷೇತ್ರದ ಪರಿಚಯ, ಹುಲಿಗೆಮ್ಮ ಹುಟ್ಟು ಬೆಳವಣಿಗೆ, ಪ್ರಸರಣ ಹುಲಿಗೆಮ್ಮನ ಆಚರಣೆಗಳು, ಹುಲಿಗೆಮ್ಮ ಇತರ ದೈವಗಳ ಸಂಬಂಧಗಳು, ಹುಲಿಗೆಮ್ಮ ದೇವಿಯ ಬಗೆಗಿನ ಕೆಲವು ಆಲೋಚನೆಗಳು, ಮಹಿಳಾ ಪ್ರತಿನಿಧಿಕರಣದ  ನೆಲೆಯಲ್ಲಿ ಹುಲಿಗೆಮ್ಮ ದೇವಿಯ ಆಚರಣೆಗಲು ಮೊದಲಾದ ಅಂಶಗಳ ಕುರಿತಾಗಿ ಚಿಂತಿಸಿದ್ದಾರೆ.

**೮. ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ : ಪ್ರೊ. ಎನ್, ಚಂದ್ರಪ್ಪ**

ಮಂಡ್ಯ ಪ್ರಕಾಶನ ಬೆಂಗಳೂರು ಈ ಕೃತಿಯನ್ನು ಪ್ರೊ. ಎನ್. ಚಂದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಪ್ರಬಂಧವಾಗಿದೆ. ಸಾಹಿತ್ಯ ಕ್ಷೇತ್ರಕ್ಕೆ ಚಂದ್ರಪ್ಪನವರು ಉಪಸಂಸ್ಕೃತಿಯ ನೆಲೆಯಿಂದ ನಿರ್ಲಕ್ಷ್ಯಕ್ಕೆ ಗುರಿಯಾದ ತಳರಚನೆಗೆ ಸಂಬಂಧಿಸಿದ ವಿಷಯಗಳನ್ನು ಎತ್ತಿಕೊಂಡು ಬರೆದಿದ್ದಾರೆ ದೈವವನ್ನು ಕುರಿತು ಅಧ್ಯಯನ ಮಾಡುವಾಗ ಈ ನಿರ್ಲಕ್ಷಿತ ಸಮುದಾಯಗಳು ಹೆಚ್ಚಾಗಿ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಕ್ಕಿಂತ ಹೆಚ್ಚು ಪ್ರಭಾವ ಹೊಂದಿದ್ದು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಕರ್ನಾಟಕ ಭಾಗದಲ್ಲಿ ಎಲ್ಲಮ್ಮ ಎಲ್ಲರಿಗೂ ಅತ್ಯಂತ ಜನಪ್ರಿಯ ಆರಾಧ್ಯದೇವತೆ. ಇಂತಹ ದೇವರ ಕುರಿತಾಗಿ ಪ್ರೊ. ಎನ್, ಚಂದ್ರಪ್ಪನವರು ಸಂಗ್ರಹಿಸಿದ ಈ ಕೃತಿಯ ವಿಷಯಗಳೆಂದರೆ

* ಆದಿವಾಸಿ ಸಮಾಜದಲ್ಲಿನ ಹೆಣ್ಣಿನ ಸ್ಥಾನ-ಮಾನವನ್ನು ಗುರುತಿಸುವುದರ ಮೂಲಕ ಕಾಲಾನುಕ್ರಮದಲ್ಲಿ ನಾಗರೀಕತೆ ಸಂಸ್ಕೃತಿಗಳು ಬೆಳೆದಂತೆ ಅಂದಿನಿಂದ ಇಂದಿನವರೆಗೆ ಆಕೆಯ ಸ್ಥಾನಮಾನದ ಏರುಪೇರುಗಳು ಹೇಗಾಗಿವೆಯೆಂಬುದನ್ನು ಗುರುತಿಸುವ ಕಾರ್ಯ ಮಾಡಿದ್ದಾರೆ.

* ಮಾತೃದೇವತೆಯ ಆರಾಧನಾಂಶಗಳು ಇಂದಿನ ಭಾರತೀಯ ಸಂಸ್ಕೃತಿಯಲ್ಲಿ ಮಿಶ್ರ ಸಂಕೀರ್ಣವಾಗಿದ್ದು, ಇಲ್ಲಿನ ದೇವ-ದೇವತೆಗಳ ಕಲ್ಪನೆಗೆ ಪುರಾಣೇತಿಹಾಸಗಳು ಆಧಾರವಾಗಿವೆ. ಈ ಪುರಾಣೇತಿಹಾಸಗಳು ಅಪೌರುಷೇಯವೆಂದು ಹೇಳಿಕೊಂಡರೂ ಸಹ ನಾಗರಿಕ ಮಾನವನ ಸೃಷ್ಟಿಗಳೆಂಬುದು ಸರ್ವವಿಧಿತವಾಗಿದೆ.

* ಪುರಾಣೋಕ್ತ ರೇಣುಕೆಯ ಕಥೆಗಳು ಪುರಾಣಾಧಾರಿತ ಆಧುನಿಕ ಕಥೆಗಳು, ಕಾವ್ಯಗಳು, ಪುರಾಣ ಜನಪದಗಳ ಸಮಬೆರಕೆ ಗದ್ಯಕಥೆಗಳ ಕುರಿತು ಚಿಂತಿಸಿದ್ದಾರೆ.

*     ವೃತ್ತಿಗಾಯಕ ಸಂಪ್ರದಾಯಸ್ಥರು ಎಲ್ಲಮ್ಮನ ಕುರಿತಾದ ನಂಬಿಕೆಗಳು, ಕಾವ್ಯ ಕಟ್ಟುವಿಕೆ, ಹಾಡುವಿಕೆ, ಹರಕೆ ಸಲ್ಲಿಸುವಿಕೆಯ ಕುರಿತು ವೃತ್ತಿಗಾಯಕರ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

*     ವೃಕ್ಷ-ಜಲಮೂಲಗಳ ಎಲ್ಲಮ್ಮನ ಸಂಪ್ರದಾಯ "ಆದಿವಾಸಿ ಮುಂಡ ಸಂಸ್ಕೃತಿಯ ಅಕ್ಕಲಿ ಲಕ್ಕಲಿ ನೆಕ್ಕಲಿ ಮೊದಲಾದ ಗಿಡಗಳ ರೂಪದಲ್ಲಿ ನೆಲೆಸಿರುವಿಕೆ ಪೂಜೆ ಸಲ್ಲಿಸುವುದು. ನಂತರ ಎರುಕಲಮ್ಮ ಕುಲದೇವತೆಯಾಗಿ ಮಾತೃಪ್ರಧಾನ ಸಮಾಜದಲ್ಲಿ ಗ್ರಾಮದೇವತೆಯಾಗಿ ಪಿತೃಪ್ರಧಾನ ಕ್ಷತ್ರಿಯ ಸಮಾಜದಲ್ಲಿ ಗಡಿದೇವಿಯಾಗಿ ಬ್ರಾಹ್ಮಣರಿಂದ ಆದಿಶಕ್ತಿ ಜಗದಂಬ ಆಗಿ ಈಗ ಎಲ್ಲರ ಅಮ್ಮ ಎಲ್ಲಮ್ಮನಾಗಿದ್ದಾಳೆ"[೮] ಎಂದು ಹೇಳುತ್ತಾರೆ.

*     ಎಲ್ಲಮ್ಮನ ಶಬ್ಧ ನಿಷ್ಪತ್ತಿ ಎಲ್ಲಮ್ಮನ ಕಾಲದ ಐತಿಹಾಸಿಕತೆ, ಮತೀಯತೆ ಎಲ್ಲಮ್ಮನ ಹುಟ್ಟು ಮತ್ತು ತಂದೆ ತಾಯಿಗಳು, ಮದುವೆ ಮಕ್ಕಳ ವಿಚಾರಗಳನ್ನು ವಿಶ್ಲೇಷಿಸಿದ್ದಾರೆ.

*     ಎಲ್ಲಮ್ಮನ ಪಾತಿವ್ರತೆಯ ಶಾಪ ಅವನತಿ ವಿಚಾರಗಳನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ಪುರುಷ ಪ್ರಧಾನತೆಯಿಂದ ಹೇಗೆ ಮಹಿಳೆಯರ ಮೇಲೆ ದೌಜನ್ಯವಾಗುತ್ತಿದೆ ಎಂಬುದನ್ನು ಚಿತ್ರಿಸಿದ್ದಾರೆ.

*     ಎಲ್ಲಮ್ಮನ ಆರಾಧಕರು ಆಸಕ್ತರು, ನಿರ್ಗತಿಕರು, ನಿರಾಶ್ರಿತರು ಹೇಗೆ ಹರಕೆ-ಪೂಜೆ ಮತ್ತು ದೇವದಾಸಿ ಜೋಗತಿಯರಾಗಿ ಐತಿಹಾಸಿಕವಾಗಿ, ಪ್ರಸ್ತುತ ಸಮದರ್ಭದಲ್ಲಿಯೂ ಕಂಡು ಬರುವುದನ್ನು ಸಮಕಾಲೀನ ಸಾಮಜಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ತಿಳಿಸುವ ನಿಟ್ಟಿನಲ್ಲಿ ಬರೆದಿದ್ದಾರೆ.

ಒಟ್ಟಾರೆಯಾಗಿ ಈ ಕೃತಿಯು ಎಲ್ಲಮ್ಮನ ಕುರಿತು ಮೌಖಿಕ ಸಂಪ್ರದಾಯದ ಮೂಲ ತಿಳುವಳಿಕೆ ಎಂತಹದ್ದು ಬುಡಕಟ್ಟು ಸಂಸ್ಕೃತಿಗಳು ಸ್ತ್ರೀಯರಿಗೆ ಉನ್ನತ ಸ್ಥಾನ ಕಲ್ಪಿಸಿ ದೇವರೆಂದು ಆರಾಧಿಸುವ, ಸಾಮಾಜಿಕ ಸ್ಥಿತಿಗಳ ಅನುಸಾರವಾಗಿ ಸಮಾಜಮುಖಿ ಚಿಂತನಾ ಆಚರಣೆಗಳ ಅನುಸರಿಸುವಿಕೆ, ಅವುಗಳಿಗೆ ಗೌರವಿಸುವಿಕೆ ಎಂತಹ ಮಾನವಿಯತೆಯ, ಸಂಬಂಧಗಳ ಕುರಿತಾಗಿ ಮಹಿಳೆಯ ಪರವಾದ ಧ್ವನಿ ಎತ್ತಿರುವುದನ್ನು ತಿಳಿಯಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧. ಕಲಬುರ್ಗಿ ಎಂ. ಎಂ, (ಸಂ) ***ಜಾನಪದ ಸಾಹಿತ್ಯ ದರ್ಶನ ಭಾಗ ೧೧***, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಅದೇ ಸಂಪುಟ, ಪುಟ ಸಂಖ್ಯೆ – ೧೧೬

೩. ಅದೇ ಸಂಪುಟ, ಪುಟ ಸಂಖ್ಯೆ – ೧೨೩

೪. ಅದೇ ಸಂಪುಟ, ಪುಟ ಸಂಖ್ಯೆ – ೧೨೩

೫. ಅದೇ ಸಂಪುಟ, ಪುಟ ಸಂಖ್ಯೆ – ೧೪೧

೬. ಕುಲಕರ್ಣಿ ಯ.ಗು, ***ಶ್ರೀ ರೇಣುಕಾ ಮಹಾತ್ಮೆ,*** ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ

೭. ಪುರುಷೋತ್ತಮ ಬಿಳಿಮಲೆ, ***ಹುಲಿಗೆಮ್ಮ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಎನ್. ಚಂದ್ರಪ್ಪ, ***ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ,*** ಮುಂಡ ಪ್ರಕಾಶನ, ಬೆಂಗಳೂರು, ಪುಟ ಸಂಖ್ಯೆ ೧೧೯

# ಅಧ್ಯಾಯ – ೩
# ಎಲ್ಲಮ್ಮನ ಕಾವ್ಯ ಮತ್ತು ಸಾಹಿತ್ಯ ಪರಂಪರೆ

### ೩.೧ ಜೋಗತಿ ಹಾಡು – ಡಾ. ಎಂ. ಎಸ್. ಸುಂಕಾಪುರ

ನಮ್ಮ ಭಾರತ ದೇಶದಂತಹ ಬಹುಸಂಸ್ಕೃತಿಯ ದೇಶಗಳಲ್ಲಿ ಶಕ್ತಿಯ ಆರಾಧನೆಯು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ವಿಜೃಂಭಣೆಯಿಂದ ನಡೆಯುತ್ತಲಿದೆ. ಪುರಾಣ ಪುಣ್ಯ ಕಥೆಗಳಲ್ಲಿಯೂ ದೇವಿಯ ಮಹಿಮೆಯನ್ನು ವರ್ಣಿಸಲಾಗಿದೆ. ಮಾನವ ಜೀವನ ಆರಂಭಕ್ಕೂ ಮೊದಲು ದೇವಿಯ ಆರಾಧನೆ ನಡೆಯುತ್ತಿತ್ತು. ಹರಪ್ಪಾ–ಮೆಹೆಂಜೋದಾರೋ ಮೊದಲಾದ ನಮ್ಮ ಪ್ರಾಚೀನ ನಾಗರಿಕತೆಯಲ್ಲಿ ದೇವಿಯ ಆರಾಧನೆಯ ಕುರುಹುಗಳು ಕಾಣಸಿಗುತ್ತವೆ. ಪ್ರಕೃತಿಯ ಪ್ರಕೋಪಕ್ಕೆ ಅಂಜಿದ ಮೂಲಮಾನವ ಅದಕ್ಕೆ ಉಗ್ರದೇವತೆಯಾಗಿ ಕಾಳಿ, ಮಾಯೆ, ದುರ್ಗಿ ಮೊದಲಾದ ಅನೇಕ ಹೆಸರುಗಳಿವೆ. ಪುರುಷ ಪ್ರಕೃತಿಗಳ ಸಂಬಂಧವೇ ಸೃಷ್ಟಿಯ ಉತ್ಪತ್ತಿಗೆ ಕಾರಣವೆಂದು ಭಾರತೀಯ ಧರ್ಮತತ್ವಗಳು ಪ್ರತಿಪಾದಿಸುತ್ತ ಬಂದಿವೆ. ತ್ರಿಮೂತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ಕ್ರಮವಾಗಿ ಸರಸ್ವತಿ, ಲಕ್ಷ್ಮಿ, ಪಾರ್ವತಿಯರೊಡನೆ ಅವಿನಾಭಾವ ಸಂಬಂಧದಿಂದ ಬೆರೆತಿರುವುದನ್ನು ಕಾಣಬಹುದಾಗಿದೆ. ವೇದ ಉಪನಿಷತ್ತುಗಳಲ್ಲೂ ಸ್ತ್ರೀ ದೇವತೆಯಾಗಿ ಇಂದ್ರಾಣಿ, ಪಾರ್ವತಿ, ಲಕ್ಷ್ಮೀ, ಸರಸ್ವತಿಯರು, ಇಂದ್ರ, ಶಿವ, ವಿಷ್ಣು ಮೊದಲಾದ ಪುರುಷ ದೇವರುಗಳಿಗೆ ಪೋಷಕರಾಗಿ ವರ್ಣಿಸಿರುವುದನ್ನು ಕಾಣಬಹುದಾಗಿದೆ.

ಸಂಖ್ಯಾಶಾಸ್ತ್ರದ ಪ್ರಕಾರ ಪುರುಷ ಏನನ್ನು ಮಾಡಲಾರ. ಆತ ಸಾಕ್ಷೀಭೂತ. ಪ್ರಕೃತಿಯೇ ವಿಶ್ವಸೃಷ್ಟಿಯನ್ನು ನಿರ್ಮಿಸುತ್ತದೆ. ಸ್ಥಿತಿ ಲಯಗಳೆರಡೂ ಆ ಪ್ರಕೃತಿಗೆ ಸಂಬಂಧಿಸಿವೆ ಎಂದು ಎಂ. ಎಸ್ ಸುಂಕಾಪುರರವರು ಜೋಗತಿ ಹಾಡು ಕೃತಿಯ ಪ್ರಸ್ತಾವನೆಯಲ್ಲಿ ಹೇಳುತ್ತಾರೆ. ಮುಂದುವರೆದು ಶೈವ ಧರ್ಮಗಳಲ್ಲಿಯೂ ಶಕ್ತಿಗೆ ಮಹತ್ವದ ಸ್ಥಾನ ಕೊಡಲಾಗಿದೆ. ಮಾರ್ಕಂಡೇಯ ಪುರಾಣದಲ್ಲಿ, ಶಕ್ತಿ ದೇವಿಯನ್ನು ಪಾರ್ವತಿಯ ಅವತಾರವೆಂದು ತಿಳಿಸಲಾಗಿದೆ. ಲೋಕ ಕಂಟಕರಾದ ಶುಂಭ, ನಿಶುಂಭ ದೈತ್ಯರನ್ನು ಕೊಂದುದಲ್ಲದೇ, ಮಹಿಷಾಸುರನನ್ನು ಮರ್ದಿಸಿದ್ದಕ್ಕಾಗಿ ಅವಳಿಗೆ ಮಹಿಷಾಸುರ ಮರ್ದಿನಿಯೆಂದು ಹೆಸರಿಸಲಾಗಿದೆ ಎಂದಿದ್ದಾರೆ.

ಸ್ತ್ರೀ ದೇವತೆಗಳನ್ನು ಬೌದ್ಧ, ಜೈನ ಮೊದಲಾದ ಧರ್ಮದಲ್ಲಿ ಆರಾಧಿಸುವುದು ಸ್ವಲ್ಪ ಕಡಿಮೆಯಾಗಿದ್ದು. ಹಿಂದೂ ಧರ್ಮದಲ್ಲಿ ಶಕ್ತಿ ದೇವತೆಗೆ ಪ್ರಾಧಾನ್ಯತೆಯಿದ್ದು ಕನ್ನಡನಾಡಿನ ಗ್ರಾಮೀಣ ಪ್ರದೇಶಗಳಲ್ಲಿಯೂ ಶಕ್ತಿಯ ಪೂಜೆಗೆ ಅಗ್ರಸ್ಥಾನವಿದೆ. ಗ್ರಾಮದೇವತೆಗಳಿಲ್ಲ ಹಳ್ಳಿಗಳೇ ವಿರಳವೆಂದು ಹೇಳಬಹುದು. ಹಳ್ಳಿಗರು ಗ್ರಾಮ ದೇವತೆಗಳಾದ ದೇವಿ, ದುರ್ಗಿಯನ್ನು ಬಹು ಭಯ–ಭಕ್ತಿಯಿಂದ ಪೂಜಿಸುತ್ತಾರೆ. ಈ ಸ್ತ್ರೀ ದೇವತೆಗಳು ಪಾರ್ವತಿಯ ಅವತಾರಿಗಳೆಂದು ಅವರು ನಂಬಿದ್ದಾರೆ. ರೋಗ–ರುಜಿನಗಳನ್ನು ಹಬ್ಬಿಸುವ, ಪರಿಹರಿಸುವ ಶಕ್ತಿ ಅವರಲ್ಲಿದೆ.

ಹಳ್ಳಿಗರು ಅಥವಾ ದೇವಿ ಆರಾಧಕರು ಮಾರೆವ್ವ, ಮಲೆಯವ್ವ, ಕರೆವ್ವ, ಕೋರವ್ವ, ಕಾಳವ್ವ, ಜಕ್ಕವ್ವ, ಮರದವ್ವ, ಹೊಳೆಯವ್ವ, ಕರಿಯವ್ವ, ಮಾರಿಕಾಂಬೆ ಮೊದಲಾದ ನೋರೆಂಟು ದೇವಿಯರನ್ನು

ಪೂಜಿಸುವುದು ಇಂದಿಗೂ ರೂಢಿಯಲ್ಲಿದೆ. ಇವರೆಲ್ಲರೂ ಒಂದಿಲ್ಲೊಂದು ರೀತಿಯಲ್ಲಿ ಪಾರ್ವತಿಯ ಅವತಾರಿಗಳು. ಇದಲ್ಲದೇ ಕೆಲವೊಂದು ಗ್ರಾಮಗಳಲ್ಲಿ ನೆಲೆಸಿದ ವಿಶಿಷ್ಟ ದೇವಿಯರಿಗೆ ಅಗ್ರ ಪೂಜೆ ಸಲ್ಲುವುದನ್ನು ಕಾಣಬಹುದು. ನಮ್ಮ ನಾಡಿನ ಶಿರಸಿಯ ಮಾರಿಕಾಂಬೆ, ಕೊಲ್ಲಾಪುರದ ಜಗದಂಬೆ, ಚಿಂಚಲಿಯ ಮಾಯಮ್ಮ, ಶಿರಸಂಗಿಯ ಕಾಳಮ್ಮ, ಬಂಕಾಪುರದ ಅಂಬೆ, ಮುನಿರಾಬಾದದ ಹುಲಿಗೆಮ್ಮ, ಸವದತ್ತಿಯ ಎಲ್ಲಮ್ಮ ಮುಂತಾದ ಶಕ್ತಿದೇವತೆಗಳು ಕನ್ನಡ ಕುಲಕೋಟಿಯ ಕುದೇವತೆಗಳಾಗಿ ಪ್ರಖ್ಯಾತಿ ಹೊಂದಿದ್ದಾರೆ. ಕನಿಷ್ಟ ವರ್ಷಕ್ಕೆ ಒಮ್ಮೆಯಾದರು ಪೂಜೆ, ಜಾತ್ರೆ, ಹಬ್ಬ ಮಾಡಿ ಹರಕೆ ಸಲ್ಲಿಸುವುದುಂಟು. ಮಂಗಳವಾರ, ಶುಕ್ರವಾರ ದೇವಿಯ ವಾರಗಳಾಗಿ ನಂಬಿದ್ದಾರೆ. ಹುಣ್ಣಿಮೆ ದೇವಿಯ ದರ್ಶನಕ್ಕೆ ಶುಭಮುಹೂರ್ತ. ಅಂದು ಭಕ್ತರು ಅಧಿಕ ಸಂಖ್ಯೆಯಲ್ಲಿ ಸೇರಿ ದೇವರಿಗೆ ಕಾಣಿಕೆ ಸಲ್ಲಿಸುತ್ತಾರೆ. ಪ್ರಸ್ತುತ ಸಂದರ್ಭದಲ್ಲೂ ದೇವಿಯ ಆರಾಧನೆ ಪ್ರಸಿದ್ಧವಾಗಿ ನಡೆಯುತ್ತಿದೆ.

**ಯಲ್ಲಮ್ಮನ ಸ್ತುತಿ ಗೀತೆಗಳು**

ಯಲ್ಲಮ್ಮ ದೇವಿಯ ಆರಾಧಕರು ತಮ್ಮ ಇಷ್ಟಾರ್ಥ ಸಿದ್ಧಿಸುವ, ವರವ ಪಾಲಿಸುವ ಶಕ್ತಿ ಮಾತೆಯಾಗಿ ಕಾವ್ಯದ ಮೂಲಕ ಹಾಡಿ, ಕುಣಿದು, ಉತ್ಸವದಿಂದ ಆರಾಧಿಸುತ್ತಾರೆ. ಇವರ ಕಲ್ಪನೆಯಲ್ಲಿ ಯಲ್ಲಮ್ಮ ದೇವಿಯು ಆದಿಶಕ್ತಿಯಾಗಿ ನಿರ್ಧಂಕಾರಿಣಿ, ವಿಷ್ಣು, ಬ್ರಹ್ಮರಿಗೆ ಜನ್ಮವಿತ್ತಾಕಿ, ದುರ್ಗಿ ಅವತಾರ ತೊಟ್ಟಾಕಿ ಶಕ್ತಿಯಾಗಿ ಕಂಡು ಬಂದಿದ್ದಾಳೆ.

"ಹೆಣ್ಣು ಮಕ್ಕಳ ಕರೆಸಿದಾಕಿ ಶಕ್ತಿ
ಬೇವಿನ ಹುಟ್ಟಿಗೆ ಉಡಿಸಿದಾಕಿ ಶಕ್ತಿ
ಗಂಡು ಮಕ್ಕಳ ಕರಿಸಿದಾಕಿ ಶಕ್ತಿ
ತಲಿಮ್ಯಾಲ ಕೊಡಾ ಹೊರಿಸಿದಾಕಿ ಶಕ್ತಿ..." [೧]

ಏಳುಕೊಳ್ಳದಾಗ ಇದ್ದಾಕಿ ನಂಬಿದ ಭಕ್ತರನ್ನು ಸಲುಹುವ ಶಕ್ತಿ ಸ್ವರೂಪಿಣಿಯಾಗಿದ್ದಾಳೆ ಎಂದು ಹಾಡುತ್ತಾರೆ. ಈ ಪದ್ಯವು ದ್ವಿಪದಿಯಿಂದ ಕೂಡಿದ್ದು ಎರಡು ಎರಡು ಸಾಲುಗಳಿಂದ ಕೂಡಿದೆ. ಮುಂದುವರೆದು ದೇವಿಯನ್ನು ಒಂದು, ಎರಡು, ಮೂರು... ಒಲವಾಗಿ, ಹೊರತಾಗಿ, ಮೂಗಾಗಿ, ಹೆಸರಾಗಿ, ಇದಿಯಾಗಿ ಮೊದಲಾದ ರೂಪದಲ್ಲಿ ಶಕ್ತಿ ಅವತಾರವಾಗಿರುವ ದೇವಿಗೆ ನಮಸ್ಕಾರಗಳನ್ನು ಸಲ್ಲಿಸುತ್ತಾರೆ.

ದೇವಿಯ ಧ್ಯಾನ ಮಾಡುವ ಭಕ್ತರಿಗೆ ಮತಿಕೊಡುವ ಮಾಯಕಾರ್ತಿ ಹಸಿರ ಸೀರೆ, ಹಸಿರ ಬಳೆಯ ತೊಟ್ಟಿರುವ ಜಗದಂಬಳಾಗಿರುವುದು ಕೃಷಿಪ್ರಧಾನ ಶ್ರಮಿಕ ಸಮುದಾಯದ ಮುಖ್ಯಸ್ಥಳಾಗಿ ಕೇಳಿದ ವರವ ಪಾಲಿಸುವ ಸಮೃದ್ಧಿ ಜೀವನಕ್ಕೆ ನಾಂದಿ ಹಾಕುವ ದೇವಿಯಾಗಿದ್ದಾಳೆ. "ಗಂದದ ಒಟ್ಟೊಂದ ಇಟ್ಟಿದೆವ್ವ ಮುತ್ತಿನ ಗದ್ದಿಗಿ ಉಚ್ಯಾಯ ಹೂವ, ದೀಪ ದೀವಿಗೆ ಹಚ್ಯಾರ ತಾಯಿ"[೨] ನಿಮ್ಮ ಸೇವೆಗೆ ಬಂದಿರುವ ಭಕ್ತರು ರಂಡಿ ಹುಣ್ಣಿವಿ ಜಾತರಿಯಲ್ಲಿ ಕೊಬರಿ ಸುಡುವ ಭಂಡಾರ ಉಗ್ಗುವ ನಮ್ಮಗೆ ನಿನ್ನ ದರುಸನ ತೋರು ಕಣ್ಣತುಂಬ ತುಂಬಿಕೊಳ್ಳುತ್ತಾ ನೆನೆದೇವ ಎನ್ನುತ್ತಾರೆ.

ದೇವಿಯ ಭಕ್ತರು ಯಾವುದೇ ಅಂಜಿಕೆಯಿಲ್ಲದೇ, ಯಾವ ದೈವಕ್ಕೂ ಸಾಟಿಯಾಗದ ದೇವಿಗೆ ತಮ್ಮ ಆತ್ಮಾರ್ಪಣೆ ಮಾಡುವಾಗ ಹಣೆಯ ಹುಬ್ಬ ತೆಗೆದು ಬತ್ತಿ ಮಾಡಿದೆ, ಕಣ್ಣ ತೆಗೆದು ರುದ್ರಾಕ್ಷಿ ಮಾಡುವೆ, ಬಾಯಾಗಿನ ಹಲ್ಲ ತೆಗೆದು ಕವಡಿ ಮಾಡಿಕೋ, ನನ್ನ ನಾಲಿಗೆ ತೆಗೆದು ಚಪ್ಪಲ ಮಾಡಿಕೋ, ಎದಿಯಾಗಿನ ಗುಂಡಿ ತೆಗೆದು ಚವುಡಕಿ ಮಾಡಿದೆಮ್ಮ, ಕರುಳಿನಿಂದ ತಂತಿ ಮಾಡಿದೆಮ್ಮ, ಕೈಯಾಗಿನ ಬಳ್ಳ ತೆಗೆದು ಕಟ್ಟಿ ಮಾಡಿದೆಮ್ಮ, ಮೈಯಾಗಿನ ತೊಗಲ ತೆಗೆದು ಗದ್ದಿಗಿ ಮಾಡಿದೆಮ್ಮ ಮೊದಲಾದ ತಮ್ಮ ದೇಹದ ಪ್ರತಿಯೊಂದು ಅಂಗಾಂಗ ತೆಗೆದು ಒಂದೊಂದು ಅಂಗಾಂಗದಿಂದ ಒಂದೊಂದು ದೇವಿಯ ಸಾಮಾಗ್ರಿಗಳಾಗಿ ಸೃಷ್ಟಿಸುವ ಅವರ ಕಲ್ಪನೆಯು ಪುರಾಣ ಮೂಲ ಕಾಲದ ಬೇಡರ ಕಣ್ಣಪ್ಪನು ಶಿವನಿಗೆ ತನ್ನ ಕಣ್ಣು ಅರ್ಪಿಸುವ ಮುಗ್ಧ ಭಾವನೆಯ ಮತ್ತು ಎಲ್ಲಮ್ಮನ ಭಕ್ತರ ಮುಗ್ಧತೆ ಸಾಮ್ಯವಿರುವುದನ್ನು ನಾವು ಇಲ್ಲಿ ನೋಡಬಹುದಾಗಿದೆ.

ಯಲ್ಲಮ್ಮ ದೇವಿಯನ್ನು ಪಾರ್ವತಿಗೆ ಹೋಲಿಸಿ "ಆದಿಶಕ್ತಿ ಪಾರ್ವತಿದೇವಿ / ಇದ್ದಾಂಗ ಯಲ್ಲಮ್ಮ ತಾಯಿ.." [೩] ದುಷ್ಟರ ಶಿಕ್ಷೆ ಶಿಷ್ಟರ ರಕ್ಷಿಸುವ, ಕಷ್ಟವೆಲ್ಲಾ ದೂರಮಾಡುವ, ಲೋಕಕ್ಕೆ ಒಳ್ಳೆದು ಮಾಡುವ ನಿನ್ನ ನೆನೆಯದ ಜೀವ ಇದ್ದು ಇಲ್ಲದಂಗ ಎಂದು ಭಕ್ತರು ನಂಬಿದ್ದಾರೆ. ಮುಕ್ತ ಮಾಡವ್ವ ನಾವು ನಿನ್ನ ಭಕ್ತಿಯ ನಿಷ್ಠೆಯಿಂದ ಪಾಲಿಸುವೆವು.

ವಿವಿಧ ರೂಪದ ದೇವಿ ಗುಡ್ಡದ ಎಲ್ಲಮ್ಮ ಭಕ್ತರ ಮನೆಯಲ್ಲಿ ನೆಲೆಸಿದ್ದಾಕಿ ದುಷ್ಟತನ ದೂರ ಮಾಡುವಾಕಿ "ಉದೋ.. ಉದೋ.. ಎಂಬುವ ಭಕ್ತರ ನೀನು ಕಾಯಕಿ. ದುಷ್ಟಮಾನವರನ್ನು ದೂರ ಮಾಡುವಾಕಿ..." [೪] ಇಲ್ಲಿ ಉದೋ ಉದೊ.. ಎಂಬುದು ಎಲ್ಲಮ್ಮನ ಕಾವ್ಯ ಪರಂಪರೆಯ ಭಕ್ತರ ಸಂಕೇತ. ತಿರುಪತಿ ತಿಮ್ಮಪ್ಪನ ಭಕ್ತರು ಗೋವಿಂದ ಗೋವಿಂದ.. ಎಂದರೆ, ಮೈಲಾರ ಪರಂಪರೆಯ ಮೈಲಾರಲಿಂಗನ ಭಕ್ತರು ಏಳು ಕೋಟಿ ಏಳು ಕೋಟಿ.. ಎನ್ನುವಂತೆ ಯಲ್ಲಮ್ಮನ ಭಕ್ತರು ತಮ್ಮ ಕಾವ್ಯ ಹಾಡುವಾಗ ಉದೋ ಉದೋ ಎಂದು ಸಂಭೋದಿಸುತ್ತಾರೆ.

ಶ್ರೀ ರೇಣುಕಾ ದೇವಿಯು ಭಕ್ತರಿಗೆ ಬೇಡಿದ ಭಾಗ್ಯವ ಕೊಡುವ ಎಲ್ಲಮ್ಮ ನಿಂದಿಸಿದವರಿಗೆ ಮುಂಡವ ಮುರಿದಾಕಿ, ತನ್ನ ಭಕ್ತರ ಸಲಹುವಾಕಿ. ಏಳುಕೊಳ್ಳದ ರೇಣುಕಾ ತಾಯಿ ಜಮದಗ್ನಿ ಮುನಿಯ ಪತ್ನಿ, ಪರಶುರಾಮನ ತಾಯಿ, ಏಳುಕೊಳ್ಳದಲ್ಲಿ ನೆಲೆಸಿದ ದೇವಿ ಶ್ರೀ ಲಕ್ಷ್ಮೀ, ಸರಸ್ವತಿ, ಭೂದೇವಿಯಾಗಿ ಸರ್ವ ಸಂಪತ್ತು ಸಿದ್ಧಿಸುವಾಕಿ ಎಂಬ ನಂಬಿಕೆ. ಏಕೆಂದರೆ ತಳ ಸಂಸ್ಕೃತಿ ಜನ ಶ್ರಮಿಕರಾಗಿದ್ದು ತಮ್ಮ ಕೋರಿಕೆ ಈಡೇರಿಸುವ ತಾಯಿಯನ್ನು ಆರಾಧಿಸುತ್ತಾರೆ.

"ನಿನ್ನ ಹೊನ್ನ ಕಳಸವು ಚೆಂದ ಮನಸಿಗಾನಂದ
ಪರಮ ಪತಿವ್ರತೆಗೆ ನೀನು ವೀರಮಾತೆ
ಪಾಪವ ಕಳೆಯಮ್ಮ ಏಳುಕೊಳ್ಳದ ರೇಣುಕಾ ತಾಯಿ
ನೀನೊಲಿದ ಮನೆಮನೆಯ ಸಂಪದಾಗರ ತಾಯಿ.." [೫]

ಆದರ್ಶ ಸ್ತ್ರೀ ರೂಪವಾಗಿ ಪರಮ ಪಾವನ ಪತಿವ್ರತೆಯಾಗಿ ಗಂಡನಿಗೆ ನಿಷ್ಠಾವಂತ ಸೇವೆ ಸಮರ್ಪಿಸಿದವಳು, ಎಕ್ಕಯ್ಯ, ಜೋಗಯ್ಯನರ ಸೇವೆಗೆ ಪಾತ್ರಳಾದ ಈ ಸವದತ್ತಿ ಎಲ್ಲಮ್ಮ ಆಧುನಿಕ

ಕಾಲದಲ್ಲೂ ಪತಿಧರ್ಮ ಪಾಲಿಸುವ ಪತಿವ್ರತೆ ಸ್ತ್ರೀಯರ ಪವಿತ್ರ ದೇವಿಯಾಗಿ ಕಂಡು ಬಂದಿದ್ದರೂ ಪ್ರಸ್ತುತ ಸಮಾಜದಲ್ಲಿ ವಿಧವೆಯರು, ಪತಿಮರಣ ಹೊಂದಿದ ಸ್ತ್ರೀಯರು, ಅವಿವಾಹಿತರು, ದೇಹ ವೈಕಲ್ಯಕ್ಕೆ ತುತ್ತಾದವರು ಆಚರಿಸು ಪರಿಯು ನೋಡಿದರೆ ತಮ್ಮ ಪಾವಿತ್ರ್ಯತೆ ಉಳಿಸಿಕೊಳ್ಳುವ ಮಾರ್ಗವಾಗಿ ಈ ಎಲ್ಲಮ್ಮನ ಆರಾಧನೆ ಗ್ರಹಿಸುವಂತಾಗಿದೆ. ಈ ಕಾವ್ಯ ಪರಂಪರೆಯು ದ್ವಿಪದಿ, ಚೌಪದಿ, ಅಷ್ಟಪದಿ ಮೊದಲಾದ ಸಾಲುಗಳ ಮಿತಿಯಿಲ್ಲದೆ ಲಯಕ್ಕೆ ತಕ್ಕಂತೆ ತಮ್ಮ ಅನುಕೂಲವಾಗುವ ರೀತಿಯಲ್ಲಿ ಕಥೆಯ ನಿರೂಪಣೆ ಯೋಗ್ಯವಾದ ಮಾದರಿಯಲ್ಲಿ ಸಾಹಿತ್ಯ ಸೃಷ್ಟಿಸಿದ್ದಾರೆ.

"ನಿನ್ನ ಕೊಡವ ಹೊತ್ತು ತಿರುಗತಾಳ ಜೋಗಮ್ಮ
ನಿನ್ನ ಹಾಡ ಹಾಡಿ ಹಾಡಿ ಕುಣಿತಾಳ ಜೋಗಮ್ಮ
ಉಧೋ ಉಧೋ ನಿನ್ನ ಪಾದಕ ಜೋಗಮ್ಮ
ನಮೋ ನಮೋ ನಿನ್ನ ಎನ್ನುವರು ಜೋಗಮ್ಮ..." [೬]

ಎಲ್ಲಮ್ಮನ ಹಾಡಿ ಹೊಗಳುವ ಆರಾಧಿಸುವ ಪ್ರತಿ ದಿನವೂ ಹಾಡುತ್ತಾ ಊರ ತಿರುಗುವ ಜೋಗಮ್ಮಗಳು ವೃತ್ತಿಗಾಯಕ ಪರಂಪರೆಯಲ್ಲೂ ಚೌಡಿಕೆ, ಭಂಡಾರ, ಚೀಲ, ಜಗಪುಟ್ಟಿ ಹೊತ್ತು ಲೋಕ ಸಂಚಾರ ಮಾಡುತ್ತಾ ದೇವಿಯ ವಿಚಾರಗಳ ಬಗ್ಗೆ ದೇವಿಯ ಪವಾಡ, ದೇವಿ ಮಹತ್ವ ಶ್ರೇಷ್ಟತೆ ಕಾಯಕ ವೈಖರಿಗಳ ಕುರಿತು ಹಾಡಿ ಕಥನಗಳ ಮೂಲಕ ಜಗಕ್ಕೆ ಯಲ್ಲಮ್ಮನ ಚರಿತ್ರೆಯನ್ನು ಕಟ್ಟಿಕೊಡುತ್ತಾರೆ.

"ಜಾಲನ ಅಳ್ಳವರ ಹೆಣ್ಣುಮಗಳ ಯಲ್ಲಮ್ಮ
ಜಾಲ ಹಾಕ್ಯಾಳ ಜಗತ್ತೆಲ್ಲ
ನೀ ಬಾರವ್ವೋ ಬಾಳೆ ದಂಡೇಲಿ..." [೭]

ಯಲ್ಲಮ್ಮ ಕಾವ್ಯ ಪರಂಪರೆಯಲ್ಲಿ ತ್ರಿಪದಿಯಲ್ಲಿ ಯಲ್ಲಮ್ಮ ಹೆಣ್ಣುಮಕ್ಕಳ ಪರವಾಗಿ ಅವರ ಆರಾಧನೆಗೆ ಯಾವ ರೀತಿ ಜಾಲ ಬೀಸಿ ತನ್ನ ಭಕ್ತರಾಗಿ ಮಾಡಿಕೊಳ್ಳುತ್ತಾಳೆ ಎನ್ನುತ್ತಾ,

"ಹುಟ್ಟಿ ಉಡುಸ್ಯಾಳ ಬತ್ತಲೆ ನಡಸ್ಯಾಳೆ
ನಕ್ಕವರ ಹಲ್ಲ ಮುರಿಸ್ಯಾಳೆ
ನೀ ಬಾರೆಲಗೊ ಬಾಳೆ ದಂಡೇಲಿ.." [೮]

ಈ ತ್ರಿಪದಿಯಲ್ಲಿ ಪ್ರಸ್ತುತ ಸಂದರ್ಭದ ಅಮಾನವೀಯ ಎನಿಸಿರುವ ಬೆತ್ತಲೆ ಸೇವೆಯ ಅನಾವರಣ ಕಾಣಬಹುದಾಗಿದೆ. ಇದು ದೇವಿಯ ಇಷ್ಟವಾದ, ಭಕ್ತರು ನಡೆದುಕೊಳ್ಳುವ ನೆರವೇರಿಸುವ ಹರಕೆಯಾಗಿದ್ದು ಇದರ ಖಂಡನೆ ಮತ್ತು ಪ್ರಶ್ನಿಸುವ ಜನರಿಗೆ ತೊಂದರೆ ನೀಡುವ ಭಕ್ತರ ಮನೋಸ್ಥಿತಿಯು ಒಂದು ರೀತಿಯ ಸಂಗತಿಯಾಗಿದ್ದರೂ ಸಹ ಈ ಆಚರಣೆಯು ಮನುಷ್ಯನ ಆಸೆಗಳ ಎಲ್ಲೆಗಳ ಮೀರಿ ನಿರಹಂಕಾರ, ನಿಸ್ವಾರ್ಥ ಸೇವಾ ಮನೋಭಾವ ಬೆಳೆಸಿಕೊಳ್ಳುವ ವಿದೇಯಕ ಸ್ಥಿತಿ ಸೃಷ್ಟಿಸುವ ಕಾರ್ಯ ಈ ಕಾವ್ಯಗಳು ಮತ್ತು ಯಲ್ಲಮ್ಮನ ಆಚರಣೆ ಮೂಲಕ ಕಲಿತುಕೊಳ್ಳಬಹುದಾಗಿದೆ.

ಸತ್ಯವಂತೆ ಶರಣೆಯು ಶಿಶುನಾಳ ಶರೀಷರ ಸೇವೆ ಮಾಡಿದಾಕಿ ನಿನ್ನ ನೆತ್ತಿಯ ಮ್ಯಾಲ ಹೊತ್ತೇವಿ ನೆತ್ತಿ ಉರದರ ಬಿಡಲಿಲ್ಲ ಸತ್ಯವ ತೋರಮ್ಮ. ನಮ್ಮ ಮಕ್ಕಳ ಸಲವಮ್ಮ ಭಗತರ ಭಾಗ್ಯವ ಕೊಡಮ್ಮ ಎಂದು ಹೇಳುತ್ತಾರೆ.

"ಮುತ್ತಿನ ಸೆರಗ
ನನತಾಯಿ ಶರಣೆಂದು ಕರದಾಗ
ಶೀಲವಂತರ ಮನೀಗಿ
ನನಶರಣಿ ಹ್ಯಾಂಗ ಹೋದೆ ಜಗದಮ್ಮ.." [೯]

"ಪರಶುರಾಮ ಕರಿತಾನ ನನ್ನ ತಾಯಿನ
ವೇದಕ್ಕೆ ಮೊದಲಾದಿ ಪೂರ್ವಕ್ಕೆ ದೇವಿಯಾದಿ
ಶಂಭೋ ಶಂಕರನಲ್ಲಿ ಪಾರ್ವತ ದೇವಿಯ" [೧೦]

ಪುರಾಣ ಮೂಲದಿಂದಲೂ ಆನೆಗೆ ಅಂಕುಶದಂತೆ, ದೋಣಿಗೆ ಡಬ್ಬಣಾಗಿ, ಜಾಣರಿಗೆ ತಂತಿಯಾಗಿ, ಮೀನಿಗೆ ಗಾನವಾಗಿ ಮೊದಲಾದ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿದ ಪ್ರತಿಯೊಬ್ಬ ಕಸುಬುದಾರರ ಸೂತ್ರದ ವಸ್ತುಗಳ ರೂಪದಲ್ಲಿ ಯಲ್ಲಮ್ಮನ ಕಾಣಲು ಪ್ರಯತ್ನಿಸುತ್ತಾರೆ. ಮೂಲೋಕದ ಒಡತಿಯೆಂದು, ಐಶ್ವರ್ಯಕ್ಕೆ ಕಾರಣೀಕತೆಯೂ, ಮಾರ್ಗದರ್ಶನ ರೀತಿಯಲ್ಲಿ ಕಷ್ಟ ನಷ್ಟ ನಿಗಲಾಕಿ ನಿನ್ನ ಜಾತ್ರೆಗೆ ವರ್ಷಕ್ಕೊಮ್ಮೆ ಬಂದು ಹರಕೆ ತೀರಸತೀವಿ. ನಿನ್ನ ನೆನೆಯದ ಜನ್ಮವ್ಯಾತಕೋ, ಎಂದು ಹಿಡೀ ತಮ್ಮ ಜನ್ಮದ ಆತ್ಮಾರ್ಪಣೆ ಮಾಡಿಕೊಳ್ಳುವ ಜನರ ಮುಗ್ಧತೆಯ ಕೆಲವೊಂದ ಸಂದರ್ಭಕ್ಕೆ ಒಡೆಯರ ಕುತಂತ್ರಕ್ಕೆ ಸಿಲುಕಿ ಗಾಣದ ಮೀನಿನಂತಾಗಿ ಉತ್ತರ ಕಾಣದೆ ಸ್ಥಿತಿಯು ಚಿಂತಾಜನಕವಾಗಿದೆ ಎಂದೇ ಹೇಳಬಹುದಾಗಿದೆ. ಮುಂದುವರೆದು ದೇವಿಯ ಚರಿತ್ರೆ ಈ ರೀತಿಯಾಗಿದೆ.

**ದೇವಿಯ ಚರಿತೆ**

ಸವದತ್ತಿ ಎಲ್ಲಮ್ಮನ ಕುರಿತಾದ ಸ್ತುತಿಯ ಕಥನ ಗೀತೆಗಳ ನಂತರ ದೇವಿಯ ಚರಿತೆ ಕುರಿತಾದ ಕಥನ ಕಾವ್ಯಗಳು ಒಂದು ಚೌಕಟ್ಟನೊಳಗೆ ಗೇಯತೆ, ಮಾಧುರ್ಯತೆ, ಲಯಬದ್ಧತೆಯಿಂದ ಕೂಡಿವೆ. ಆಯಾ ಪ್ರಾದೇಶಿಕ ಅಂಶಗಳ ಒಳಗೊಂಡ ಭಾಷೆಯಲ್ಲಿ ಕೇಳುಗರಿಗೆ ಹಿತವೆನಿಸುವ ರೀತಿಯಲ್ಲಿ ಲಯಬದ್ಧತೆಯಿಂದ ಕಾವ್ಯ ಕಟ್ಟಿ ಹಾಡಿದ್ದಾರೆ. ಈ ಕಾವ್ಯಗಳ ಮೂಲಕ ಎಲ್ಲಮ್ಮನ ಚರಿತ್ರೆ ಈ ರೀತಿಯಾಗಿ ಕಟ್ಟಿ ಕೊಟ್ಟಿದ್ದಾರೆ.

"ಕಾಶ್ಮೀರದರಸನ ಮಗಳು ನೀನಮ್ಮ
ಮೂಕಾಂಬಿಕೆ ಗುಡಿಯೊಳಗ ಜಗನದ್ಯೆಮ್ಮಾ
ಯೇಳುಮಂದಿ ತಾಯಂದಿರಮ್ಮ
ನಿನ್ನ ಸಂರಕ್ಷಣೆ ಮಾಡಿದರಮ್ಮಾ..." [೧೧]

ಕಾಶ್ಮೀರದ ರೇಣುಕಾ ರಾಜನ ಮಗಳಾಗಿ, ಏಳು ಮಂದಿ ತಾಯಿಗಳ ಆಶ್ರಮದಲ್ಲಿ ಬೆಳೆದಳು. ಚಿಕ್ಕ ವಯಸ್ಸಿನಲ್ಲಿ ಎಷ್ಟೇ ಕಷ್ಟಗಳಿದ್ದರೂ ಸಹ ಬಾಳೆದಿಂಡಿನಂತೆ ಬೆಳೆದು ಯೌನಕ್ಕೆ ಬಂದಾಗ ಹನ್ನೆರಡನೇ ವರ್ಷಕ್ಕೆ ಜಮದಗ್ನಿಗೆ ಮನಸೋತ ವಿವಾಹವಾದ ಪ್ರಸಂಗವು ಇಡೀ ಚರಿತ್ರೆ ಕೇಲವ ಐದೇ ನಿಮಿಷದಲ್ಲಿ ಒಬ್ಬೊಬ್ಬರು ಒಂದು ರೀತಿಯಾಗಿ  ಕಾವ್ಯಗಳ ಮೂಲಕ ಹಾಡುತ್ತಾರೆ. ಜಗಪುಟ್ಟಿ ಹೊತ್ತು ಮಣಿಕಟ್ಟಿಸಿಕೊಂಡು ದೇವರ ಸೇವೆಗೆ ಮೀಸಲಾದ ವೃತ್ತಿಗಾಯಕರು ಕಾವ್ಯ ಕಲೆಯು ಸೊಗಸಾಗಿ ಮೂಡಿಬಂದಿದೆ.

ರೇಣುಕಾದೇವಿ ಯಲ್ಲಮ್ಮ ಜಮದಗ್ನಿಯನ್ನು ಪತಿಯಾಗಿ ಸ್ವೀಕರಿಸಿ ಪತಿಭಕ್ತಿಯಿಂದ ಹಾವಿನ ಸಿಂಬೆ, ಮರಳಿನ ಕೊಡದಿಂದ ತನ್ನ ಪತಿವ್ರತದ ಫಲವಾಗಿ ನೀರ ತರುತ್ತಾಳೆ. ತನ್ನ ಏಕಾಗ್ರತೆ ಭಂಗ ತರುವ ನದಿಯಲ್ಲಿ ಜೋಡಿ ಮೀನ ಕಂಡಾಗ ಕೊಡ ಒಡೆದು ಹಾವು ಹರಿದು ಹೊಯಿತು. ತಪವಿದ್ದ ಮುನಿ ಸಿಟ್ಟಿಗೆದ್ದು ಶಾಪ ನೀಡಿದ. ಆಗ ಕುಷ್ಟರೋಗಕ್ಕೆ ತುತ್ತಾದಳು ಎಕ್ಕಯ್ಯ – ಜೋಗಯ್ಯನರು ಅಲ್ಲಿಗೆ ಬಂದು ಎಲ್ಲಮ್ಮಳ ರೋಗ ನಿವಾರಿಸಿ ಜನ್ಮ ಉದ್ಧಾರ ಮಾಡಿದ ಘಟನೆಯು ಪುರುಷ ಪ್ರಧಾನ ವ್ಯವಸ್ಥೆಯು ಸ್ತ್ರೀಯರ ಸ್ವಾತಂತ್ರ್ಯ ಆಲೋಚನಾ ಶಕ್ತಿ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಸವಾರಿ ಮಾಡಿದ ರೀತಿಯನ್ನು ತಿಳಿಯಬಹುದಾಗಿದೆ. ಎಲ್ಲಮ್ಮ ದೇವಿಯ ಶಕ್ತಿ ಎಂತಹದ್ದು ಎಂದು ಹೇಳುವಾಗ ವಕ್ತರ ನುಡಿಯಲ್ಲಿ ಈ ಕೆಳಗಿನಂತೆ ಎಲ್ಲಮ್ಮಳ ಶಕ್ತಿಯನ್ನು ತಿಳಿಯಬಹುದಾಗಿದೆ.

"ಉಸುಕಿನ ಬಿಂದಿಗಿ ಮಾಡಿ
ಹಾವಿನ ಸಿಂಬಿಗಿ ಕಟ್ಟಿ
ಗಂಗಿಗೆ ಕೈಮುಗಿದು
ಗರತಿಯ ಶಕುತಿ ತೋರಿ
ಪಾರ್ವತಿ ಹಂಗ ದೇವಿ ಹೊಂಟಾಳ
ಹಿಂದ ಯೋಳ...
ತಾಯ ಶಕುತಿ ಮುಂದಾದ ಶಕುತಿ
ಗರತಿಯ ಬಕುತಿ ಮುಂದಾದ ಭಕುತಿ
ಶಿವನು ಸೋತಾನ ಪಾರ್ವತಿ ಮುಂದ
ಜಮದಗ್ನಿ ನಾಚ್ಯಾನ ಯಲ್ಲಮ್ಮನ ಹಿಂದ
ಇವಳ ಮಹಿಮೆ ನೋಡಿ ನಾವು ಮೆಚ್ಚೇವಿ
ಹಿಂದ ಯೋಳ ಗುಡ್ಡವ ಕಟ್ಟಿ" [೧೨]

ಓದು, ಬರಹ ತಿಳಿಯದ ದೇವಿಯ ಆರಾಧಕರು ದಿನ ನಿತ್ಯದ ಕಾಯಕ, ವೃತ್ತಿಯಲ್ಲಿ ಬೇಸರ ಕಳೆಯುವ ರೀತಿಯಲ್ಲಿ ದೇವಿಯ ಸ್ಮರಣೆ ಲಯಬದ್ಧವಾಗಿ, ಪ್ರಾಸಬದ್ಧವಾಗಿ ತಾಳಕ್ಕೆ ತಕ್ಕಂತೆ ಕಾವ್ಯ ಕಟ್ಟಿ ಹಾಡುವ ಕಲೆ ಅವರಿಗೆ ದೇವರ ವರವೋ, ಜೀವನ ಪಾಠವೋ, ಅನುಕರಣೆಯೋ ನಿತ್ಯ ಜೀವನ ಶೈಲಿಯ ಫಲವೋ ಎನ್ನುವಂತೆ ಕಾವ್ಯ ಸೃಷ್ಟಿ ಕಲೆಯು ವಿದ್ವಾಂಸರಿಗೆ ಸರಿಸಾಟಿಯಾಗದ ರೀತಿಯಲ್ಲಿ ಉನ್ನತ ಶಿಖರಕ್ಕೇರಿಸಿ ಹಾಡಿ ಕುಣಿಯುತ್ತಾರೆ.

ದೇವಿಯ ವರ್ಣನೆ ಕಥನ ಕಾವ್ಯಗಳು

"ಇಂದು ನಮ್ಮವ್ವಗ
ನಿಂಬೆಹಣ್ಣಿನ ಪೂಜಿ
ಗಂಧದ ಪೂಜಿ ಉದಯಾಕ
ಭಾಗ್ಯದ ಸಂಪನ್ನಿ
ಬಾಗಿಲಿಗೆ ಬಂದರ
ತೂಗುವ ಮಂಚ ಇಳಿವ್ಯಾರ
ಪಟ್ಟೆದಂಚಿನ ಸೀರಿ
ಗಟ್ಟೇಸಿ ಉಡಿ ತುಂಬಿ
ಉಡಿಯಾಗ ಹೂವ ಕಟ್ಯಾರಲ್ಲ
ಉಡಿಯಾಗ ಹೂ ಇಟ್ಟರ
ಕೊಟ್ವಾಳ್ರಿ ಜಗದಂಬ
ಮಾಲಿ ಹೆಣದಾಳ ಹಗಲೆಲ್ಲ" [೧೩]

ಸವದತ್ತಿ ಎಲ್ಲಮ್ಮನ ಜಾತ್ರೆ ಉತ್ಸವ ಮತ್ತು ಪೂಜೆ ಮಾಡುವ ಭಕ್ತರು ನಿಂಬೆ ಹನ್ನು, ಪಟ್ಟದಂಚಿನ ಸೀರೆ, ಹೂವು, ಹಸಿರು ಬಳೆ ತೊಡಿಸಿ ಭಂಡಾರದ ಓಕಳಿ ಚೆಲ್ಲುವ ಪರಿಯು ಮನಮೋಹಕವಾಗಿರುತ್ತದೆ. ಹಿರಿಗುಡ್ಡದ ಜಾತ್ರಿ ಹುಣ್ಣಿಮೆ ದಿನದಂದು ಜನರ ಹಿಂಡು, ಗಾಡಿಯ ದಂಡು ಭಕ್ತರ ಪರಿಸೆ ಹರಿಕೆ ತಿರಿಸುವ ಜನರು ದೇವಿಯ ಆರಾಧನೆಯ ತಮ್ಮ ಕಷ್ಟ-ನಷ್ಟ ತೊಳೆವ ಮತ್ತು ಇಷ್ಟಾರ್ಥಗಳ ಪಾಲಿಸುವ ಎಲ್ಲಮ್ಮಳ ಶಕ್ತಿಯ ಪ್ರತಿಕವಾಗಿದೆ.

ಭಕ್ತರು ನಂಬಿರುವಂತೆ ಜನ್ಮ ಪಾವನವಾಗಬೇಕಾದರೆ ದೇವಿಯ ಹಿರೇಗುಡ್ಡದ ಜಾತ್ರೆ ಒಮ್ಮೆಯಾದರೂ ಹೋಗಿ ಭಂಡಾರ ಹಚ್ಚಿ, ಜೋಗುಳ ಬಾವಿಯ ಜಳಕ ಮಾಡಿ, ಉಧೋ ಉಧೋ ಎಂದು ಎಲ್ಲಮ್ಮನ ಸ್ಮರಿಸಿ, ದೀಡ ನಮಸ್ಕಾರ ಹಾಕಿ, ಕರ್ಪೂರ ಹಾಕಿ, ಕೊಬರಿ ಸುಟ್ಟು ಎಲ್ಲಮ್ಮನ ಹೇಳಿದಂಗ ನಡೆದುಕೊಂಡರೆ ಅಷ್ಟೈಶ್ವರ್ಯ ಪಾಲಿಸುವಳು ಎಂಬ ಕಲ್ಪನೆ ಇದೆ ಮತ್ತು ದೇವಿಯ ಮಹಿಮೆಯಿಂದ ಗುಡ್ಡೆಲ್ಲ ಮಾತಾಡ್ಯೆತಿ. ರಂಡಿ ಹುಣ್ಣಿಮೆಯು ಪರಶುರಾಮನ ವೈರತ್ವದ ಸಂಕೇತವಾಗಿ ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ ಜೋಗತಿಯರು ಎಣಿಗೊಂಡದಲ್ಲಿ ಜಳಕ ಮಾಡ್ತಾರೆ. ಭಂಡಾರ ಹಚ್ಚಿ ಹರಕೆ ತೀರಿಸಿದರೆ ಜನ್ಮ ಸಾರ್ಥಕವಾಗುವ ಕಲ್ಪನೆಯು ಒಂದು ರೀತಿಯ ರೋಗ-ರುಜಿನಗಳು ಪಾಪ ಪರಿಹಾರವಾಗುತ್ತದೆ ಎಂಬ ವೈಜ್ಞಾನಿಕ ಸತ್ಯಾಸತ್ಯತೆಗಳು ಬದಲಾಗುತ್ತಿರುವ ಸಾಮಾಜಿಕ ಪ್ರಕ್ರಿಯೆಯಲ್ಲಿ ಹುಸಿಯಾಗಿದೆ. ಇಂದು ಜಾತ್ರೆ ಕೇವಲ ಮನರಂಜನೆ, ಮೋಜು, ಬೇಸರ ಕಳೆಯಲು ನೆರವೇರುವಂಥಾಗಿ, ವ್ಯಾಪಾರೀಕರಣದ ಪ್ರಭಾವಕ್ಕೆ ತುತ್ತಾಗಿದೆ. ಜಾತ್ರೆಗಳಲ್ಲಿ ಇಂದು ಸಣ್ಣಪುಟ್ಟ ಆಟಿಕೆ ವಸ್ತುಗಳಿಂದ ದೊಡ್ಡ ದೊಡ್ಡ ವಸ್ತುಗಳ ಪ್ರದರ್ಶನ ಮಾರಾಟ, ಮನರಂಜನೆ ಮೇಳಗಳು, ಪ್ರದರ್ಶನಗಳು ಕಂಡು ಬರುತ್ತಿವೆ.

ಸವದತ್ತಿ ಯಲ್ಲಮ್ಮ ದೇವಿಯು ಯಕ್ಕಲಿಗ ಜೋಗವ್ವ ರೂಪದಲ್ಲಿ ಕುಣಿಯುತ್ತಾ ಕುಣಿಯುತ್ತಾ

ಹಡ್ಡಲಗಿ ಹೊತ್ತುಕೊಂಡು ಕವಡಿಯ ಹಾರ ಧರಿಸಿ, ದೇವಿಯ ಭಂಡಾರ ಬಗಲಾಗ ಇಟ್ಟುಕೊಂಡು ತಲಿತುಂಬ ಜಡಿಯ ಬಿಟ್ಟುಕೊಂಡು ಮನಿ ಮನಿ ತಿರುಗ್ಯಾಳ ಜನರಿಗೆ ಒಳ್ಳೆಯದು ಮಾಡುತ್ತಾಳ. ಉಧೋ ಉಧೋ ಅನ್ನುತ್ತಾ ಗಮಡಸರ ಕುಣಿಸುತ್ತಾ ಮೆರವ ದೇವಿಯ ಜಾತ್ರೆಯು ಬಾಳ ಮಂದಿ ಕೂಡುವ ಭಾರತ ಹುಣ್ಣಿವೆಗೆ ಹೆಣ್ಣು–ಗಂಡು ಮಕ್ಕಳು–ಮರಿ ಸೇರಿ ಹೂ, ಹಣ್ಣು ಕಾಯಿ ಕರ್ಪೂರದ ರಾಶಿ ರಾಶಿ ನೋಡಲು ಮೈಮನಸು ಹಸನಾಗುತ್ತೈತಿ.

"ಹಣ್ಣು ಹಣ್ಣು ಮುದಕಿಯನಾದಳು ಬಾ
ಬಡವರ ಮನೆಗೆ ಬಂದಾಳು ಬಾ
ಉಧೋ ಉಧೋ ಎನ್ನುವ ಶಬ್ಧವ ತೋರ್‍ಯಾಳು ಬಾ
ಶಬ್ಧಕ್ಕೆ ಗಾಬರಿ ಆದೇವು ಬಾ
ಏಳ ಕೊಳ್ಳದಿ ಇರುವ ಯಲ್ಲಮ್ಮ ಜಾತ್ರೆಗೆ ಹೋಗೋನು ಬಾ
ನಿತ್ಯ ಪೂಜೆ ಮಾಡನು ಬಾಬಾ.." [೧೪]

ದೇವಿಯ ಭಕ್ತರ ಅರಸಿ ಭಕ್ತರ ಮನೆಗೆ ಬರುವ ಕಲ್ಪನೆಯು ಪ್ರಾಚೀನ ಕಾಲದಿಂದಲೂ ಇಂದಿನ ಆಧುನಿಕ ಕಾಲದಲ್ಲಿಯೂ ಇದ್ದು, ಇದು ಭಾರತೀಯ ಸಂಸ್ಕೃತಿಯ 'ಅತಿಥಿ ದೇವೋ ಭವಾ' ಎಂಬ ಕಲ್ಪನೆಯ ಪ್ರತೀಕವಾಗಿದ್ದು ಸವದತ್ತಿ ಯಲ್ಲಮ್ಮನ ಭಕ್ತರು ಸಹ ದೇವಿಯ ಬರುವಿಕೆಗೆ ತಮ್ಮ ಮನೆಗೆ ಬರುವ ಜೋಗಮ್ಮಳ ರೂಪದಲ್ಲಿ ದೇವಿಯ ಆಗಮನವನ್ನು ನಿರೀಕ್ಷಿಸುತ್ತಾರೆ. ದೇವಿಯ ಜಾತ್ರೆಗೆ ಹೋಗಿ ನಮ್ಮ ಬಡತನ, ದುಃಖ, ಕಷ್ಟಗಳ ಹೇಳಿಕೊಳ್ಳಬೇಕು ದೇವಿ ಅದನ್ನು ನಿವಾರಿಸುತ್ತಾಳೆ. ದೇವಿಯ ವರ್ಣಿಸುವಾಗ,

"ಕೈಗೆ ಬಲಿ ಚೆಂದ, ಹಣಿಗೆ ಕುಂಕುಮ ಚೆಂದ
ಕೊರಳಿಗೆ ಕಟ್ಟಿದ ತಾಳಿ ಚೆಂದ
ಯಲ್ಲಮ್ಮಗ ಜಡಿ ಚೆಂದ
ಯಲ್ಲಮ್ಮಗ ಜಡಿ ಚೆಂದ, ಜಡಿಗೆ ಭಂಡಾರ ಚೆಮದ
ಭಂಡಾರಕ ಭಕುತಿ ಚೆಂದ
ಭಕುತಿಗೆ ದೇವಿ ಚೆಂದ" [೧೫]

ಹೀಗೆ ದೇವಿಯ ಬಗ್ಗೆ ಹೇಳುವಾಗ ಸ್ತ್ರೀ ಕೈಗೆ ಬಳೆ ಚೆಂದ, ಹಣೆಗೆ ಕುಂಕುಮ ಚೆಂದ, ಕೊರಳಿಗೆ ಕಟ್ಟಿದ ತಾಳಿ ಚೆಂದ ಹಾಗೆಯೇ ದೇವಿಗೆ ಜಡಿ ಚೆಂದ, ಭಂಡಾರ ಅಂದ, ಚೌಡಿಕೆ ಚೆಂದ ದೇವಿಯ ಗುಡ್ಡ ಚೆಂದ ಅಲ್ಲಿಯ ಚೌಡಿಕೆ ಪದ ಚೆಂದ ಎಂದು ಹೇಳುವಾಗ,

"ಜಡಿಗಾಗಿ ಮಹಾಭಾರತ ಆಯ್ತಲ್ಲ ಹಿಂದ
ಜಡಿ ಮಹಿಮೆ ತಿಳಿದ ನಾವು
ಜಡಿಗೆ ಕೈಮುಗಿವುದ ಚೆಂದ" [೧೬]

ರಾಮಾಯಣ ಮಹಾಭಾರತಗಳು ಹೆಣ್ಣು, ಹೊನ್ನು, ಮಣ್ಣಿಗಾಗಿ ನಡೆದಿದ್ದು ಹೆಣ್ಣಿನ ಮೇಲಿನ ವ್ಯಾಮೋಹ ಪುರುಷನಿಗೆ ಎಂತಹದ್ದು ಎಂದು ತಿಳಿಯಪಡಿಸುವ ಕಾವ್ಯವಾಗಿದೆ. ಚೌಡಿಕೆ ಸಂಪ್ರದಾಯದಲ್ಲಿ ಜಡಿ ಬಿಡುವ ಸಂಪ್ರದಾಯವು ಸಹ ಇದ್ದು ಇದು ದೇವಿಯ ಪಡೆದವರು, ಆರಾಧಕರು ಜಡಿ ಬಿಟ್ಟು, ಚೌಡಿಕೆ ಹಿಡಿದು, ಭಂಡಾರ ಚೀಲ ಬಗಲಿಗೆ ಹಾಕಿ, ದೇಸ ತಿರುಗುವ ಮನಿ ಮನಿ ಅಲೆಯುತ್ತಾ, ದೇವಿಯ ಸ್ಮರಣೆ ಮಾಡುತ್ತಾ ದೇವಿಯ ಚರಿತ್ರೆ ಕಾವ್ಯದ ಮೂಲಕ ಹಾಡಿ ಹೊಗಳುತ್ತಾರೆ.

"ಚೌಡಿಕೆಯ ನಾದಕ್ಕೆ
ಗೆಜ್ಜೆಯ ಕುಣಿತಕ್ಕೆ
ಕುಣಿದಾವ ದಾರಿಕೇರಿ
ಬೆಳಕಿನಾಂಗ ಬರತಾಳ
ನೋಡ ರೇಣುಕವ್ವ" ೧೭

ಚೌಡಿಕೆ ಪದ ಹಾಡುವ ಜೋಗವ್ವಗಳು ಗೆಜ್ಜೆ ಕಟ್ಟಿ ಕುಣಿಯುತ್ತಾರೆ. ಇದು ಜನರ ಮನಸ್ಸಿಗೆ ಪುಳಕಗೊಳಿಸುವಂತಹ ಸನ್ನಿವೇಷ ಸೃಷ್ಟಿಸುತ್ತದೆ. ದೇವಿ ಆದಿ ಶಕ್ತಿಯಾಗಿ ಮೂರು ಲೋಕದವಾಸಿ ದೇವಿ ಏಳು ಜನ ಅಕ್ಕತಂಗಿಯರಲ್ಲೆ ಶ್ರೇಷ್ಟಳು. ಇವಳು ಅಕ್ಕ-ತಂಗಿಯರಾದ ಎಂಕವ್ವ, ಮಾಯವ್ವ, ತುಳಜವ್ವ, ತುಕ್ಕವ್ವ, ಮೊದಲಾದವರಿಗಿಂತ ಶ್ರೇಷ್ಟಳು. ದೇವಿಯ ಗುಡಿಯು ಏಳುಕೊಳ್ಳದಾಗ ಇದ್ದು ಬಂಗಾರ ಕಳಸ, ದೇವಿಯ ತಲೆಯ ಮೇಲೆ ಮುತ್ತಿನ ದಂಡಿ, ಮೂಗಿನಲ್ಲಿ ರತ್ನದ ನತ್ತು, ಕೊರಳಿಗೆ ಚಂದ್ರಹಾರ, ಹಣೆಗೆ ಗಿರಗಂಧ ಕುಂಕುಮ ರೇಖೆ, ನಡುವಿಗೆ ವಜ್ರದ ಡಾಬು, ತೊಡೆಯ ಮೇಲೆ ಬಲರಾಮ, ಗದ್ದಿಗೆ ಮ್ಯಾಲೆ ಪಾದರಕ್ಷೆ, ಪೌಳಿಯೊಳಗ ಜ್ಯೋಗ್ಯಾರಾಟ, ಗುಡಿಮುಂದೆ ಕಪ್ಪರದೀಪ ಗುಡಿಯ್ಯಾಗ ಭಂಡಾರ ಮಾದೇವಿಗೆ ಈ ಎಲ್ಲಾ ಅಲಂಕಾರಿಕ ವಸ್ತುಗಳು ದೇವಿಯ ಸೌಂದರ್ಯ ವೃದ್ಧಿಸುತ್ತದೆ. ಪ್ರಸ್ತುತ ದೇವಿಯ ಗುಡಿಯ ಚಿತ್ರಣ ಭಕ್ತರ ಕಲ್ಪನೆಯಲ್ಲಿ ಕಾವ್ಯಗಳ ಮೂಲಕ ಯಲ್ಲಮ್ಮ ದೇವಿಯ ಹಾಡಿ ಕುಣಿಸುತ್ತಾರೆ. ಭಂಡಾರ ಎರಚುವುದರಲ್ಲಿ ಒಂದು ವೈಜ್ಞಾನಿಕವಾದ ಉಪಯೊಗವಿದ್ದು, ಅದು ಚರ್ಮ ರೋಗ ನಿವಾರಣಾ ಶಕ್ತಿ ಹೊಂದಿದೆ. ಭಂಡಾರ ಮೈಮೇಲೆ ಎರಚುವುದರಿಂದಾಗಿ ಮಾನವನ ಶರಿರದ ಹಲವು ಚರ್ಮದ ಕಾಯಿಲೆಗಳ ನಿವಾರಣೆಯಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಭಂಡಾರಕ್ಕೆ ಕೆಮಿಕಲ್ ಮಿಶ್ರಣ ಮಾಡಿರುವುದರಿಂದಾಗಿ ಚರ್ಮದ ರೋಗಗಳ ಸೃಷ್ಟಿಗೆ ಕಾರಣವಾಗಿದೆ ಎಂದೇ ಹೇಳಬಹುದಾಗಿದೆ.

"ದೇಶದ ಮೇಲೆ ಮುರಿಸ್ಯಾಲ ಕರಿಯೆಲ್ಲ
ಗಂಡ ಹೆಂಡಿರನ ಬಿಡಿಸ್ಯಾಲ ಭಂಡಾಟ
ತಂಟೆಯನೆಲ್ಲ ಹರಿಸ್ಯಾಳ" ೧೮

ಸವದತ್ತಿ ಎಲ್ಲಮ್ಮನ ಭಕ್ತರಿಗೆ ಶರಣೆಯರು ಎಂದು ಎಲ್ಲಮ್ಮನ ವಾಚಿಸಿ, ಜಾತ್ರೆಲಿ ಬೇವಿನುಡಿಗೆ ತೊಡುವ ಕುರಿತಾಗಿ ಆರೋಗ್ಯದ ದೃಷ್ಟಿಯಿಂದ ಈ ಪದ್ಧತಿಯು ಸರಿಯಾಗಿದ್ದು, ಹುಡುಗರಿ ಮೀಸೆ

ತೆಗೆಸ್ಯಾಳೆ ಎಂದರೆ ಹಾರ್ಮೋನ್ ಬದಲಾವಣೆಯ ದೃಷ್ಟಿಯಿಂದಾಗಿ ವೈಜ್ಞಾನಿಕ ಚಿಂತನೆಗೆ ಒಳಪಡಿಸಿ ಅವರ ಜೀವನ ಶೈಲಿ, ವರ್ತನೆ ಭಾವನೆಗಳ ಪ್ರತೀಕವಾಗಿದೆ. ದೇವಿ ತನ್ನ ಭಕ್ತರು ದೇವಿಯ ಆರಾಧನೆಗೆ ಶ್ರಮಿಸುವಂತೆ ಮಾಡುತ್ತಾಳೆ. ಗಂಡ-ಹೆಂಡಿರ ಬಿಡಿಸಿ, ಕೊಡ ಹೊರಿಸಿ ತಮ್ಮ ಮಾನಸಿಕ ಆಸೆ ಈಡೇರಿಸುವ ರಿತಿಯಲ್ಲಿ ಈ ರೂಢಿ ಸಂಪ್ರದಾಯಗಳು ಆಚರಣೆಯಲ್ಲಿವೆ ಎಂದೇ ಹೇಳಬಹುದಾಗಿದೆ. ದೇವಿಯ ಮೀಸಲು ಯಾವವು ಎಂದು ಹಾಡುವಾಗ ಈ ರೀತಿ ಹೇಳುತ್ತಾರೆ.

"ಹುಗ್ಗಿ ನನಗ ಮೀಸಲು ರಾಮ
ಹೋಳಿಗಿ ನನಗ ಮೀಸಲು
ಹುಗ್ಗಿ ಎಂಬುದು ಹುಟ್ಟಿನೆಂಜಲ
ಹೋಳಿಗೆಂಬುದು ಕಲ್ಲಿನೆಂಜಲ" ದೇವಿ ಹ್ಯಾಂಗ ಮೀಸಲ
ಭಾವ ನನಗ ಮೀಸಲು ರಾಮ
ಭಕ್ತಿ ನನಗ ಮೀಸಲ
ಕಾಡಬ್ಯಾಡಪ ತಾಯಿನ
ಕಾಡದು ಧರ್ಮ ಅಲ್ಲಪ ಪರಶುರಾಮ//
ಅದೇನನಗ ಮೀಸಲ" [೧೯]

ಭಕ್ತರು ದೇವಿಗೆ ತಾವು ಅರ್ಪಿಸುವ ವಸ್ತುಗಳಾಗಿ ಹೂ, ಹಣ್ಣು, ಕಾಯಿ, ಕರ್ಪೂರ, ಸೀರೆ, ಕುಪ್ಪಸ, ಹುಗ್ಗಿ ಮತ್ತು ಹೋಳಿಗೆ ಅರ್ಪಿಸುತ್ತಾರೆ. ಅವರು ಮೊದಲು ದೇವಿಗೆ ಅವುಗಳನ್ನು ಅರ್ಪಿಸಿ ನಂತರ ತಾವು ಬಳಸುತ್ತಾರೆ. ಇದು ದೇವಿಗೆ ಅರ್ಪಣೆಯಾಗುವುದಿಲ್ಲ. ಇವಕ್ಕೆ ಬದಲಾಗಿ ಭಾವ ಮತ್ತು ಭಕ್ತಿಯಿಂದ ದೇವಿಯನ್ನು ನೆನೆಯುತ್ತಾ ದೇವಿಯ ಆರಾಧನೆ ಮಾಡಿದರೆ ದೇವಿಯು ಒಲಿಯುವ ಪರಿಯು ನಿರ್ಮಲ ಚಿತ್ತದ ಭಕುತಿಗೆ ಮಾತ್ರ ಸಾಧ್ಯ. ದೇವಿಯ ಬಗೆಗಿನ ಜನರ ಭಕ್ತರ ಕಲ್ಪನೆಯು ಬೇಡಿದ ವರಗಳ ಕೊಡುವಳು ಎಂದು ನಂಬಿದ್ದಾರೆ. ದೇವಿಗೆ ಎಣ್ಣೆಗೊಂಡದ ನೀರು, ಜರತಾರಿ ಮುಡಿ, ಭಂಡಾರ, ಕೇದಿಗೆ ಹೂ, ತೆಂಗಿನಕಾಯಿ, ತುಪ್ಪದ ದೀಪ, ಕರ್ಪೂರದ ಧುಪ, ಕರಿಗಡಬು ಎಡಿಯ ದೇವಿಗೆ ಇಷ್ಟ ಎಂದು ಅವುಗಳ ಎಂಜಲು ಮಾಡದೆ ಮೊದಲ ನೈವೇಧ್ಯ ಮಾಡಿ ಜಾತ್ರೆಯಲ್ಲಿ ಭಕ್ತಿ ಸಮರ್ಪಿಸುತ್ತಾರೆ. ಹೀಗೆ ದೇವಿಯ ವರ್ಣನೆ ಕಥನ ಕಾವ್ಯಗಳು ದ್ವಿಪದಿ, ತ್ರಿಪದಿ, ಚೌಪದಿ ಮೊದಲಾದ ಅನೇಕ ಕಾವ್ಯ ಪ್ರಕಾರಗಳಲ್ಲಿ ಲಯಕ್ಕೆ, ತಾಳಕ್ಕೆ ತಕ್ಕಂತೆ ಗೇಯತೆಯಿಂದ ಕಾವ್ಯ ಕಟ್ಟಿ ದೇವಿಯನ್ನು ವರ್ಣಿಸುತ್ತಾ ಹಾಡಿ, ಕುಣಿಯುತ್ತಾರೆ. ಮುಂದುವರೆದು ದೇವಿಯ ಮಹಿಮಾ ಕಥನ ಕಾವ್ಯಗಳು ಈ ರೀತಿಯಾಗಿವೆ.

**೪. ದೇವಿಯ ಮಹಿಮೆ**

"ಶರಣು ಶರಣು ಶರಣಂಬೆ ಭವಾನಿ
ಕರುಣಿಸು ಕಲ್ಯಾಣಿ
ಸಾವಿರ ನಾಮವ ಹೊಂದಿದ ಗೌರಿ

ಕಾಶ್ಮೀರದರಸನ ಪ್ರೀತಿ ಕುಮಾರಿ
ವಿಸ್ಮಯ ಅನಂತ ಮಹಿಮೆಯ ತೋರಿ
ವಸುಧೆಯೊಳು ಮೆರೆಯುವ ಮೂಲಾಧರಿ" ೨೦

ಸವದತ್ತಿ ಎಲ್ಲಮ್ಮನ ಭಕ್ತರು ದೇವಿಯ ಮಹಿಮೆ ಕುರಿತು ಕಾವ್ಯ ಕಟ್ಟುವಾಗ ಉದ್ದೇಶಪೂರ್ವಕವಾಗಿ ದೇವಿಯ ಮಹಿಮೆ ಸಾಮಾಜಿಕ ವ್ಯವಸ್ಥೆಯಲ್ಲು ಆಗುವ ವಿಸ್ಮಯಕ್ಕೆಲ್ಲ ದೇವಿನೇ ಕಾರಣ ಎಂದು ನಂಬಿದ್ದಾರೆ. ನೈಸರ್ಗಿಕ ವಿಸ್ಮಯಗಳು ಸಹಜ ಪ್ರಕ್ರಿಯೆಗಳಾಗಿದ್ದು ವೈಜ್ಞಾನಿಕವಾದ ಅನೇಕ ಕಾರಣಗಳ ಫಲವಾಗಿ ಅನೇಕ ಘಟನೆ–ವಿಘಟನೆಗಳು ಜರುಗುವವು. ಅವಕ್ಕೆಲ್ಲ ಕಾಣದ ಶಕ್ತಿವೊಂದು ಪ್ರಭಾವಿಸಿದೆ. ಸೃಷ್ಟಿ–ಲಯಕ್ಕೆಲ್ಲಾ ಆ ಶಕ್ತಿಯೇ ಕಾರಣ ಎಂದು ನಂಬುತ್ತಾರೆ. ದೇವಿ ಅನಾದಿ ಕಾಲದಿಂದಲು ಅಚಲವಾದಿಯಾಗಿ ಯುಗ ಯುಗಾಂತರಿಯಾಗಿ ಜಗುದ್ಧರಿಸುತ್ತಾ ಬಂದಿದ್ದಾಳೆ. ಕಾಶ್ಮೀರ ರಾಜನ ಪ್ರೀತಿಯ ಕುಮಾರಿ ವಿಸ್ಮಯ ಅನಂತ ಮಹಿಮೆಯ ತೋರಿ ವಸುಧೆಯೊಳು ಮೆರೆಯುವ ಮೂಲಾಧಾರಿ, ತ್ರೇತಾಯುಗದಿ ಸೀತೆಯ ರೂಪದಲ್ಲಿ ಜನಿಸಿದವಳು. ದ್ವಾಪರಯುಗದಲ್ಲಿ ದೌಪದಿಯಾಗಿದ್ದವಳು; ಕಲಿಯುಗದಲ್ಲಿ ಎಲ್ಲಮ್ಮಳಾಗಿ ಮಹಾಕಾಳಿಯಾಗಿ ಎಕ್ಕಯ್ಯ ಜೋಗಯ್ಯಗೆ ಉಘೇ ಉಘೇ ಎಂಬ ಮಂತ್ರ ಜಪಿಸುವಂತೆ ಮಾಡಿದವಳು ಎಂಬ ಕಲ್ಪನೆಯು ಇಂದಿಗೂ ನಿಜವೆನ್ನುವಂತೆ ಕಾವ್ಯ ಸೃಷ್ಟಿಸುತ್ತಾರೆ.

ದೇವಿಯ ಮಹಿಮೆ ಕಾವ್ಯಗಳಲ್ಲಿ ಉತ್ತರ ಕರ್ನಾಟಕ ಜನಭಾಷೆಯಲ್ಲಿ ಕಾವ್ಯ ಸೃಷ್ಟಿಯಾಗಿದ್ದು, ಸಂಭಾಷಣೆ, ಕಥೆಯ ರೂಪದಲ್ಲಿ ಹಾಡುತ್ತಾರೆ.

"ಮುನ್ನೂರರವತ್ತು ಸಿದ್ಧರ ಗುಡದಾಗ
ಆಳ್ವಿಕೆ ಮಾಡ್ಯಾರೋ ಬಲ್ಲಂಗ
ಚಕ್ರ ಹತಿಯಾರ ತಯ್ಯಾರ ಮಾಡ್ಯಾಳಾಗ
ಸಿದ್ಧರನ ಹೊಡೆದಾಳೊ ಕ್ಷಣದಾಗ
ದೈತ್ಯರನ ಹೊಡೆದಾಳೊ ಗಳಿಗ್ಯಾಗ" ೨೧

ಹೀಗೆ ದೇವಿಯು ದುಷ್ಟರ ಸಂಹಾರ ಮಾಡಿ ಸಾಮಾಜಿಕವಾದ ಕಾಳಜಿ ತನ್ನ ಭಕ್ತರ ಸಲಹುವ ದೇವಿ ದುಷ್ಟರ ಶಿಕ್ಷೆ ಶಿಷ್ಟರ ರಕ್ಷಣೆಯ ಸಂಕೇತವಾಗಿರುವುದನ್ನು ನಾವು ಕಾಣಬಹುದಾಗಿದೆ.

ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರ ಪ್ರಾಬಲ್ಯ ಹೆಚ್ಚಿಸುವ ನಿಟ್ಟಿನಲ್ಲಿ ಈ ಕಾವ್ಯ ಸೃಷ್ಟಿಯಾಗಿದ್ದು ಇದರ ಮೂಲಕ ದೇವಿಯು ಕಾರ್ತವೀರ್ಯನ ಸೊಕ್ಕಡಗಿಸಿದ್ದು, ಪಾಪಿ ಕೌರವ ಕರ್ಣ, ದುಶ್ಯಾಸನನ ಶಾಪ ಕೊಟ್ಟ ದ್ರೌಪದಿಯ ರೂಪಕ್ಕೆ ದೇವಿಯ ಕಲ್ಪನೆ, ರಾಮಾಯಣದಿ ಸೀತೆಯಾಗಿ ರಾವಣನ ಕುಲ ನಾಶ ಮಾಡಿದಾಕಿ. ಕಲಿಯುಗದಿ ಜಮದಗ್ನಿ ಋಷಿ, ಕಾರ್ತವೀರ್ಯನ ತಲೆ ಕಡಿಸಿದ ದೇವಿ ಭಕ್ತರಿಗೆ ಪ್ರೀತಿಯ ಮಾತೆ. ಪುರುಷರ ದೌರ್ಜನ್ಯ ಅಟ್ಟಹಾಸ ಹುಟ್ಟಡಗಿಸಿದ ದೇವಿಯು ಎಷ್ಟೋ ಜನರ ಬೆತ್ತಲೆ ಮಾಡಿ ಭಿಕ್ಷೆ ಬೇಡಿಸಿ ಗೆಜ್ಜೆ ಕಟ್ಟಿ ಕುಣಿಸಿದ ದೇವಿ, ಬೇವಿನುಡಿಗೆ ಉಡಿಸಿ ದೀಡ ನಮಸ್ಕಾರ ಹಾಕುವಂತೆ ಮಾಡಿದ್ದಾಳೆ. ಗಂಡ ಹೆಂಡಿರ ಜಡಿಸಿ ಭಂಡಾರ ಚೀಲ ಕೊಟ್ಟವಳು ಮುತ್ತು ಕಟ್ಟಿಸಿ ಮೆರೆಸಿದ ತಾಯಿಯ

ಬಗೆಗಿನ ಒಂದು ಪದ್ಯ ಇಲ್ಲಿ ನೋಡಬಹುದಾಗಿದೆ.

"ಭಾಳ ಮಂದಿನ ಬತ್ತಲೆ ಮಾಡಿದಿ
ಬೇವ ಉಡ್ಸಿ ಮೋಜ ನೋಡಿದಿ
ತಾಳ ಝಾಂಗಟಿ ಬಾಜಾ ಉಡಿಸಿದಿ
ಮ್ಯಾಳಗೊಂಡು ಭಿಕ್ಷಕ ಜೋಡಿಸಿದಿ" ೨೨

ಎಲ್ಲಮ್ಮ ದೇವಿಯು ತನ್ನ ಶಕ್ತಿಯನ್ನು ತೋರಿಸುತ್ತಾಳೆ. ತನ್ನ ಅವತಾರಹೇಳುವಾಗ ಉಗ್ರ ಸ್ವರೂಪಿ ದೇವಿ ಕ್ಷುಲ್ಲಕ ಜನರ ನಾಶಮಾಡುವ ದೇವಿಯು ಕೆಂಡ ಜಡೆ, ಕೆಂಗಣ್ಣು, ಹಲ್ಲು ಮಸೆಯುತ್ತಾ ಬರುವಾಗ ದೇವಿಯು

"ಭಂಡಜನರಿಗೆ ಬಂಡ ಮಾಡಿದಳು
ಅಖಂಡರೂಪ ತಾಳಿ ನಿಂತಿಹಳು
ಕೆಂಡದಂತೆ ಕಣ್ಣು ಕಿಡಿಕಿಡಿ ಸುರಿಸುತ
ಹಿಂಡಿ ಹಿಪ್ಪಿ ಮಾಡಿ ಬಗೆ ದಾಳಂಬಾ" ೨೩

ದೇವಿ ರೂಪಕ್ಕೆ ಭಂಡ ಜನರ ನಾಶ ಅಖಂಢ ರೂಪದಿ ವೈರಿಗಳು ಹಿಮ್ಮೆಟ್ಟಿಸಿ ತನ್ನ ಪ್ರಾಬಲ್ಯ ಸಾಧಿಸುವ ಬಂಡಾಯ ಧೋರಣೆಯ ದೇವತೆಯಾಗಿ ಸ್ತ್ರೀಯರ ಶಕ್ತಿ ಮೆರೆದಿದ್ದಾಳೆ. ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿಯೆಂಬಂತೆ ಮಹಿಳೆಯರ ಉಗ್ರತ್ವ ಸ್ವರೂಪ ಕಾಣಬಹುದಾಗಿದೆ. ಹೆಣ್ಣು ಎಷ್ಟು ಮೃದು ಸ್ವಭಾವದವಳಾಗಿದ್ದರೂ ಸಹ ಆ ಮೃದುತ್ವದ ಹಿಂದೆ ಉಗ್ರತೆ ಇರುತ್ತದೆ ಎಂದು ಹೇಳಬಹುದಾಗಿದೆ. ಕೆಟ್ಟ ಜನರಿಗೆ ತನ್ನ ಶಕ್ತಿಯಿಂದ ಹಿಮ್ಮೆಟ್ಟಿಸುತ್ತಾ, ನೀತಿ ಮೀರಿ ನಡೆಯುವ ಜನರನ್ನು ಅಥವಾ ಕಷ್ಟಗಳನ್ನು ಕೊಡುವಂತ ಶಕ್ತಿ ಅವರ ಶಕ್ತಿಯನೆಲ್ಲಾ ನಾಶಮಾಡುವ ಕೌಶಲ್ಯ ಪವಾಡಗಳ ದೈವಿ ಶಕ್ತಿ ಯಲ್ಲಮ್ಮನಲ್ಲಿದೆ. ಶರಣು ಎಂದು ತಲೆಬಾಗಿ ಬಂದ ಜನರ ತಲೆ ಕಾಯುತ್ತಾಳೆ. ಭಕ್ತರ ಕಂಟಕ ನಿವಾರಿಸುವ ಶಕ್ತಿ ದೇವಿಗಿದೆ. ತಮ್ಮ ಅಷ್ಟೈಶ್ವರ್ಯ ದೊರಕುವಂತೆ ಮಾಡುವ ಗುಣ ಯಲ್ಲಮ್ಮಗೆ ಇದೆ.

"ದಯಮಾಡ ದೇವಿ ರೇಣುಕಾ
ನಿನಗಾ ಏನ ಮಾಡುವೆ ಸಣ್ಣ ಬಾಲಕಾ
ನಾ ನಿನಗಾ ಏನ ಮಾಡುವೆ ಸಣ್ಣ ಬಾಲಕಾ" ೨೪

ಈ ಜನಪದ ತ್ರಿಪದಿಯ ಯಲ್ಲಮ್ಮನ ಶ್ರೇಷ್ಟತೆ ಮತ್ತು ಸಾಮಾಜಿಕ ವ್ಯವಸ್ಥೆಯು ಯಲ್ಲಮ್ಮನ ಬಗೆಗಿನ ಭಕ್ತರ ನಂಬಿಕೆ ಎಂಥದ್ದು, ಸ್ತ್ರೀ ಪ್ರಧಾನತೆ, ಮಹಿಳಾ ಸಬಲೀಕರಣವು ಮಾತೃ ಪ್ರಧಾನ ಕುಟುಂಬಗಳ ಬಗೆಗಿನ ಚಿತ್ರಣ ಕಾಣಬಹುದಾಗಿದೆ. ದೇವಿಗೆ ತಲೆಬಾಗಿ, ಶರಣಾಗಿ ಜಾತ್ರೆಗೆ ಹೋಗಿ ಅಲ್ಲಿ ಇಷ್ಟಾರ್ಥ ಚಿಂತನೆ ದೇವಿಗೆ ಪ್ರಾರ್ಥನೆ, ಹರಕೆಯ ಮೂಲಕ ಭಕ್ತಿ ಸಮರ್ಪಿಸುತ್ತಾರೆ. ಜೋಗಳಬಾವಿಗೆ ಹೋಗಿ ಸ್ನಾನ ಮಾಡುವ ಭಕ್ತರು ತಮ್ಮ ಅಮಂಗಳ ನಿವಾರಣೆ ಮತ್ತು ತಮ್ಮಲ್ಲಿರುವ ಕಾಮ, ಕ್ರೋಧ, ಲೋಭ, ಮದ ಮತ್ಸರಗಳ ದುರ್ಗುಣ ಬಿಡುವ ನಿಟ್ಟಿನಲ್ಲಿ ಪಾದಯಾತ್ರೆ ದೀಡು

ನಮಸ್ಕಾರ, ಬೇವಿನುಡಿಗೆ, ಬೆತ್ತಲೆಸೇವೆ ಮಾಡುವ ಪದ್ಧತಿಗಳು ಆಚರಣೆಗೆ ಬಂದಿರಲು ಸಾಧ್ಯ ಎಂದು ಹೇಳಬಹುದಾಗಿದೆ. ಅದು ಕಾಲಕ್ರಮೇಣ ಯಜಮಾನ್ಯ ಸಂಸ್ಕೃತಿಗೆ ಒಳಪಟ್ಟ ಪುರೋಹಿತಶಾಯಿಯ ಕಪಿಮುಷ್ಟಿ ಯಲ್ಲಿ ಸಿಲುಕಿ ಅಂಧಾಚರಣೆಯ ದಾರಿಗೆ ಸಾಗಿರುವುದೆಂದೆ ಹೇಳಬಹುದಾಗಿದೆ.

"ಹಮ್ಮ ಮಾಡಿದ ಮಂದೀನೆಲ್ಲ ಕಮ್ಮಿಮಾಡಿ
ಮೀಸಿಬೋಳ್ಸಿ ಇಡ್ಸಿದಾಳ ಬಳಿ
ಗಂಡ ಓದು ಹೆಣ್ಣು ಮಾಡಿ ಹೆಣ್ಣು ಓದು ಗಂಡ ಮಾಡಿ
ಕೈಯಾಗ ಕೊಟ್ಯಾಳ ಹಡ್ಲಿಗಿ ಹಿಡಿ" ೨೫

ಸಾಮಾಜಿಕ ಸ್ತರ ವ್ಯವಸ್ಥೆಯೊಳಗ ಎಲ್ಲಾ ಜಾತಿ, ಮತದ ಜನರ ಸಲಹುವ ತಾಯಿ, ಎಲ್ಲ ಭಕ್ತರನ್ನು ಸಮಾನತೆಯಿಂದ ನೋಡುತ್ತಾಳೆ. ಹಮ್ಮು ಮಾಡಿದವರಿಗೆ ಪಾಠ ಕಲಿಸುವ ನಿಟ್ಟಿನಲ್ಲಿ ದೇವಿಯ ಪವಾಡವೆಂಬಂತೆ ಸಹಜವಾಗಿಯೇ ಮಾನವನ ದೇಹದಲ್ಲಾಗುವ ಜೈವಿಕ ವ್ಯತ್ಯಾಸ ಬದಲಾದ ವರ್ತನೆಗಳಿಗೆ ದೇವಿನೇ ಕಾರಣವೆಂಬಂತೆ ಈ ಕಾವ್ಯ ಕಟ್ಟಿ ಹಾಡುತ್ತಾರೆ. ಸೃಷ್ಟಿಯ ಈ ರಹಸ್ಯ ಅರಿಯಲು ಸಾಧ್ಯವಾಗದ ಸ್ಥಿತಿಯಲ್ಲಿ ಅಮಾನವೀಯವೆಂಬಂತೆ ದೇವಿಯ ಬಗ್ಗೆ ಕಲ್ಪನೆಗಳು ಅತಿರೇಖವೇ ಆಗಿದೆ. ಅದಕ್ಕೆಲ್ಲಾ ಸಾಮಾಜಿಕ ಮನಸ್ಥಿತಿಗಳ ಒಪ್ಪಿಗೆಯೂ ಸಹಜವಾಗಿಯೇ ಒಪ್ಪಿಕೊಂಡಿದೆ. ಗಂಡು ಹೆಣ್ಣು ಆಗುವುದು ಹೆಣ್ಣು ಗಂಡಾಗುವ ವರ್ತನೆಗಳು ಅವರಲ್ಲಿ ಉಂಟಾದ ಹಾರ್ಮೋನುಗಳ ವ್ಯತ್ಯಾಸದಿಂದ ಎನ್ನುವ ಬದಲಾಗಿ ದೇವಿಯ ಮಹಿಮೆ ಎಂದು ನಂಬಿರುವಂತಹ ಸ್ಥಿತಿಯು ಮನುಕುಲದ ಒಂದು ದೌರ್ಬಲ್ಯವಾಗಿದೆ.

ಹೀಗೆ ಈ ಕಾವ್ಯದಲ್ಲಿ ಯಲ್ಲಮ್ಮ ದೇವಿಯ ಕುರಿತು ಅವಳ ಮಹಿಮೆ, ಪವಾಡ, ಶಕ್ತಿ, ಭಕ್ತಿಯ ಕುರಿತು ಸೊಗಸಾಗಿ ಕಾವ್ಯಗಳ ಮೂಲಕ ದೇವಿಯನ್ನು ಆರಾಧಿಸುತ್ತಾರೆ. ಕೊನೆಯಲ್ಲಿ ಮಂಗಳಾರತಿಯ ಕಾವ್ಯಗಳ ಮೂಲಕ ಈ ಕಾವ್ಯ ಕೊನೆಗೊಳ್ಳುತ್ತದೆ. ಮಂಗಳಾರತಿ ಕಾವ್ಯಗಳನ್ನು ಈ ಕೆಳಗಿನಂತೆ ತಿಳಿಯಬಹುದಾಗಿದೆ.

**೫. ಮಂಗಳಾರತಿ ಕಾವ್ಯಗಳು**

ಜನಪದರು ಯಾವುದೇ ಮಂಗಳಕಾರ್ಯ ಮಾಡಿದರೂ ಅವರು ತಮ್ಮ ಪೂಜಾಕಾರ್ಯ ಸ್ತುತಿಗಿತೆಗಳಿಂದ ಆರಂಭವಾಗಿ ಕೊನೆಯಲ್ಲಿ ಮಂಗಳಾರತಿ ಹಾಡುಗಳ ಮೂಲಕ ಮುಕ್ತಾಯ ಹಾಡುತ್ತಾರೆ. ಈ ಮಂಗಳಾರತಿಯು ದೇವಿಗೆ ಮತ್ತು ನೆರೆದ ಜನರ ನಡುವೆ ನಡೆದಂತಹ ಪೂಜಾ ವಿಧಿವಿಧಾನಗಳ ಕುರಿತಾಗಿ ಪ್ರಶಂಸೆಯ ನುಡಿಯಾಗಿ ಕಂಡುಬರುತ್ತದೆ. ಒಂದು ಸಮುದಾಯವು ತಮ್ಮ ಕರುಳ ಬಳ್ಳಿಯ ಒಂದೆಡೆ ಸೇರಿ ದೇವಿಯ ಪೂಜಾ ವಿಧಿವಿಧಾನ ಮಾಡಿದ ಬಗೆ ಈ ಕೆಳಗಿನ ಕಾವ್ಯದ ಮೂಲಕ ತಿಳಿಯಬಹುದಾಗಿದೆ.

"ತಾಯಿ ಮಕ್ಕಳ ಕೂಡಿದರಲ್ಲ
ಕೂಡಿ ಎರಡ ಮಾತಾಡಿದರಲ್ಲ
ಮಂಗಳ ಆರತಿ ಬೆಳಗಿದರಮ್ಮಾ

ಬಲ್ಲವರಿಗೆ ಸಿರಿ ಯಲ್ಲಮ್ಮನಿಗೆ
ಹಣಿಮ್ಯಾಲಿಟ್ಟ ಗಂಧದ ಬಟ್ಟ
ಹುಬ್ಬನಲಿ ಇಟ್ಟಳ ಚಂದ್ರದ ಬಟ್ಟ
ಕಿವಿಯಲಿ ವಾಲಿ ಬುಗಡಿಯನಿಟ್ಟು
ಮಂಗಳಾರತಿ ಬೆಳಗಿದರಮ್ಮ" ೨೬

ಎಲ್ಲಮ್ಮ ದೇವಿಗೆ ತನ್ನೆಲ್ಲಾ ಭಕ್ತರು ಮಕ್ಕಳ ಸಮಾನರು. ಅವರು ಜಾತ್ರೆ, ವಿಶೇಷ ಕಾರ್ಯಕ್ರಮಗಳಲ್ಲಿ ಮಂಗಳ ಕಾರ್ಯ ಮಾಡುವ ನಿಟ್ಟಿನಲ್ಲಿ ಒಂದೆಡೆ ಸೇರುತ್ತಾರೆ. ಸೇರಿ ಸಂತೊಷದಿ ಜಾತ್ರೆ ಮುಗಿಸುತ್ತಾರೆ. ಒಂದೆಡೆ ಭಕ್ತರ ಸೇರುವಿಕೆಯಾದರೆ ಇನ್ನೊಂದೆಡೆಗೆ ಕರುಳ ಬಳ್ಳಿಗಳ ತಾಯಿ-ಮಕ್ಕಳ, ಅಕ್ಕ-ತಂಗಿ, ಅಣ್ಣ-ತಮ್ಮ, ತಂದೆ-ತಾಯಿ, ಸಹೋದರ-ಸಹೋದರಿಯರು, ಸ್ನೇಹಿತರು, ಸಂಬಂಧಿಕರು ಹಬ್ಬದ ನೆಪದಲ್ಲಿ ಒಂದೆಡೆ ಕೂಡಿ ಜಾತ್ರೆ ಮಾಡಿ ಸಿಹಿ ಊಟ ಮಾಡಿ ಕಷ್ಟ ಸುಖ-ದುಃಖ ಹಂಚಿಕೊಳ್ಳುತ್ತಾ ಮನಸ್ಸು ಹಗುರ ಮಾಡಿಕೊಳ್ಳುತ್ತಾರೆ. ಅಂತಹ ಸಂದರ್ಭದಲ್ಲೂ ದೇವಿಗೆ ಅಲಂಕಾರ ಮಾಡಿ ತಾಯಿ ಮಕ್ಕಳು ಕೂಡಿ ಮಾತನಾಡುತ್ತಾ ಮಂಗಳಾರತಿ ಬೆಳಗುತ್ತಾರೆ. ದೇವಿಯ ಮಹಿಮೆ ಎಂಬಂತೆ ಗಂಡು ಹೋಗಿ ಹೆಣ್ಣು ಆಗುವ ಸ್ಥಿತಿ ಪ್ರಶಂಸಿಸುತ್ತಾರೆ. ಬಲ್ಲವರಿಗೆ ಸಿರಿ ಯಲ್ಲಮ್ಮ ದೇವಿ, ತುಪ್ಪದ ದೀಪ ಹಚ್ಚುವವರು ಹಣೆಗೆ ಗಂಧದ ಬಟ್ಟ ಇಡುವರು. ಕಾಯಿ ಕರ್ಪೂರ ಹಚ್ಚುತ್ತಾ ಪಲ್ಲಕ್ಕಿಗೆ ಹೂವ ಹಾಕುತ್ತಾ ದೀಡ ನಮಸ್ಕಾರ ಹಾಕುತ್ತಾ ಮರೆವ ಭಕ್ತರ ಭವಣೆಯು ಪರಿಸಿಯ ಸಡಗರದಿ ಮಂಗಳಾರತಿ ಬೆಳಗುವರಮ್ಮ ಎಂದು ಕಾವ್ಯ ಕಟ್ಟಿ ಹಾಡುತ್ತಾರೆ.

ದೇವಿಗೆ ಅಲಂಕಾರ ಮಾಡಿ ಮೆರವಣಿಗೆ ಮಾಡುವಾಗ
"ಹಸರ ಸೀರೆಯುಟ್ಟು ಎಳಸ ವಂಕೀಯನಿಟ್ಟು
ಕೆಸರಾಗ ಹಾದು ಬರುವವೇಳೆ ಯಲ್ಲವ್ವ ತಾಯಿ
ಒಬ್ಬರಿಗೆ ತಿಳಿಯಾವ ಮಂಗಳ
ಜಯ ಮಂಗಳ ನಿತ್ಯ ಶುಭಮಂಗಳ" ೨೭

ಜಾತ್ರೆಯಲ್ಲಿ ಪವಾಡಗಳು,. ಕೆಂಡ ತುಳಿಯುವುದು , ಊರ ಸುತ್ತಿ ಜನರ ಮನೆ ಮನ ಪ್ರವೇಶಿಸುವುದು ಇದರಿಂದಾಗಿ ಜನರು ಸಂತೋಷದಿಂದ, ಆನಂದದಿಂದ ಹಬ್ಬ ಮಾಡುವ ಪದ್ಧತಿಗಳ ವರ್ಣಿಸುತ್ತಾರೆ. ಈ ಮಂಗಳಾರತಿ ಪದಗಳಲ್ಲಿ ದೇವರು-ಭಕ್ತ ನಡುವಿನ ಅನ್ಯೋನ್ಯತೆ ಎಂಥಹದ್ದು ಎಂದು ತಿಳಿಯಲು ಸಾಧ್ಯವಾಗುತ್ತದೆ. ದೇವಿಯ ಆರಾಧನೆ ಹಬ್ಬ ಮಾಡಿದರ ನಿತ್ಯ ಶುಭಕಾರ್ಯ ನಡೆಯುತ್ತವೆ. ನಮ್ಮಲ್ಲಿರುವ ಅಂಧತ್ವ ನಿವಾರಣೆಯಾಗಿ ಜೋಗತಿಯರು ಪೂಜೆಗೆ ಬಂದರೆ ಅಮಂಗಳ ನಿವಾರಣೆ ಆಗುತ್ತದೆ ಎಂಬ ಕಲ್ಪನೆಯು ದೇವಿಯ ಪ್ರತಿರೂಪವೆಂಬಂತೆ ನಿತ್ಯ ನೆನಯುತ್ತಾ ಪೂಜಿಸುತ್ತಾರೆ.

ಹೀಗೆ ಈ ಕಾವ್ಯದಲ್ಲಿ ಎಲ್ಲಮ್ಮನ ಸ್ತುತಿಗಿತೆಗಳಿಂದ ಆರಂಭವಾಗಿ ಮಂಗಳಾರತಿಯವರೆಗೆ ಎಲ್ಲಮ್ಮನ ಕುರಿತಾಗಿ ಭಕ್ತರು ಐದರಿಂದ ಮೂವತ್ತು ನಿಮಿಷಗಳಲ್ಲಿ ಹಾಡಿ ಮುಗಿಸಬಹುದಾದಂತಹ ಕಥನ ಕಾವ್ಯಗಳ ಸಂಗ್ರಹ ಇದಾಗಿದೆ. ಪ್ರತಿನಿತ್ಯ ಭಕ್ತರು ಈ ಹಾಡುಗಳನ್ನು ಹಾಡುತ್ತಾ ಮನೆ ಮನೆ ತಿರುಗುತ್ತಾ

ಕಾಣಬಹುದಾಗಿದೆ. ಈ ಕಥನ ಕಾವ್ಯಗಳು ಬಿಡಿ ಬಿಡಿಯಾದ ದೇವಿ ಚರಿತ್ರೆ ಕಟ್ಟಿಕೊಡುವ ಮಾದರಿಯಲ್ಲಿದ್ದು, ಯಾವುದೇ ನಿರ್ದಿಷ್ಟ ಛಂದಸ್ಸಿಗೆ ಒಳಗಾಗದೆ ಹಾಡಲು ಅನುಕೂಲವಾಗುವ ರೀತಿಯಲ್ಲಿ ಯಲ್ಲಮ್ಮನ ಕಥೆ ಕಟ್ಟಿ ಕೊಡುತ್ತಾರೆ . ಒಂದು ಸೊಗಸಾದ ಹಾಡುಗಬ್ಬದ ರೀತಿಯಲ್ಲಿ ದೇವಿಯ ಕಥೆ ಚಿಕ್ಕ ಚಿಕ್ಕ ಹಾಡುಗಳಲ್ಲಿ ಕಟ್ಟಿಕೊಟ್ಟಿದ್ದಾರೆ

**೩.೨ ಸುವರ್ಣ ಜನಪದ ಕಾವ್ಯ ಸಂಗ್ರಹ**

**ಏಳುಕೊಳ್ಳದ ಎಲ್ಲಮ್ಮ – ಎಸ್. ಜಿ. ಸಿದ್ದರಾಮಯ್ಯ ಹಾಗೂ ಕೆ. ಆರ್. ಸಂಧ್ಯಾರೆಡ್ಡಿ**

ಈ ಜನಪದ ಕಾವ್ಯ ಸಂಗ್ರಹವು ಪೌರಾಣಿಕ ಹಿನ್ನೆಲೆಯಿಂದ ರಚನೆಗೊಂಡಿದ್ದು, ಶಿವನ ಕಥೆ, ಶ್ರೀಕೃಷ್ಣನ ಚರಿತ್ರೆ, ರುಕ್ಮಿಣಿ, ದ್ರೌಪದಿ ಮೊದಲಾದ ಪೌರಾಣಿಕವಾದ ವ್ಯಕ್ತಿಗಳ ಚರಿತ್ರೆ ಇರುವಂತೆ ಏಳುಕೊಳ್ಳದ ಯಲ್ಲಮ್ಮನ ಬಗ್ಗೆಯೂ ಪೌರಾಣಿಕ ಐತಿಹ್ಯದ ಕಥೆಗಳಿದ್ದು ಹಬ್ಬ ಹರಿದಿನಗಳು, ಜಾತ್ರೆಗಳು ವಿಶೇಷ ದಿನಗಳ ಸಂದರ್ಭದಲ್ಲಿ ಬೇಸರ ಕಳೆಯಲು ಪೌರಾಣಿಕ ಕಾವ್ಯ ಹಾಡುತ್ತಾರೆ. ಜೊತೆಗೆ ಕಥೆಯ ವಿಶ್ಲೇಷಣೆಯ ಕಾರ್ಯವನ್ನು ಮಾಡುತ್ತಾ ಬಂದಿರುವ ಪರಂಪರೆಯು ಇಂದಿಗೂ ನೋಡಬಹುದಾಗಿದೆ.

ಪೌರಾಣಿಕ ಕಾವ್ಯ ಸ್ಮರಣೆಯು ಇಡೀ ರಾತ್ರಿ ದೇವಿಯ ಸ್ಮರಣೆ ಮಾಡುತ್ತಾರೆ. ಕಾವ್ಯವನ್ನು ವಾದ್ಯಗಳ ಸಂಯೋಜನೆಯ ಸಹಾಯದಿಂದ ಹಾಡುತ್ತಾರೆ ಮತ್ತು ಆ ಕಾವ್ಯಗಳ ವಿಶ್ಲೇಷಣಾ ಕಾರ್ಯ ಮಾಡುತ್ತಾರೆ. ಜೊತೆ ಜೊತೆಗೆ ಬೇಸರ ಕಳೆಯಲು ಹಾಸ್ಯ, ಮನರಂಜನೆ, ಒಗಟುಗಳು ವಿನೋದದ ಚಟುವಟಿಕೆಗಳನ್ನು ಮಾಡುತ್ತಾ ಕಾವ್ಯ ಬೆಳೆಸುತ್ತಾರೆ. ಶಿವರಾತ್ರಿ ಸಂದರ್ಭದಲ್ಲೂ ದೇವಿ ಮಹಾತ್ಮೆ, ಶಿವಸ್ಮರಣೆ, ಜಾಗರಣೆ ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ತಮಗಿಷ್ಟವಾದ ದೇವರ ಸ್ಮರಣೆ ಮಾಡುತ್ತಾರೆ.

ಎಲ್ಲಮ್ಮನ ಕಾವ್ಯ ಹಾಡುವ ಮತ್ತು ಅನುಸರಿಸುವ ಭಕ್ತರು ಎಲ್ಲಾ ಮತ ಜಾತಿಯ ಜನರು ಆಚರಿಸುವುದನ್ನು ನೋಡಬಹುದಾಗಿದೆ. ಆಯಾ ಮತದ ತುಳಿತಕ್ಕೆ ಒಳಗಾದ ಮತ್ತು ಕೆಳಸ್ತರದ ಜನರು ಎಲ್ಲಮ್ಮನ ಆರಾಧನೆ ಮಾಡುತ್ತಿರುವುದನ್ನು ನೋಡಬಹುದಾಗಿದೆ. ಎಲ್ಲಮ್ಮ ನಂಬಿದ ಭಕ್ತರ ಸಲಹುವಳು ಎಂಬ ನಂಬಿಕೆ ಇರುವುದರಿಂದ ಸಮಸ್ತ ಜನ ಸಮೂಹವೇ ದೇವಿಯ ಭಕ್ತರಾಗಿ ಕಂಡು ಬರುತ್ತಿದ್ದಾರೆ.

ಪೌರಾಣಿಕ ಕಥೆಯಲ್ಲಿ ಎಲ್ಲ ಮ್ಮನ ಚರಿತ್ರೆಯು ಶಿವನ ಕಥೆಯಷ್ಟೆ ಪುರಾತನಕ್ಕೆ ಸಂಬಂಧಿಸಿದ್ದಾಗಿದ್ದು ದೇವಿಯುಗ್ರ ಸ್ವರೂಪದಿಂದಾಗಿ ದುಷ್ಟ ಜನರ ಸಂಹಾರ ಮಾಡಿದ ಪರಿಯ ಈ ಕೆಳಗಿನ ಕಥನದ ಮೂಲಕ ತಿಳಿಯಬಹುದಾಗಿದೆ.

"ಹಿರಣ್ಯಾಕ್ಷ ಹಿರಣ್ಯಕಶಪ
ಮಣ್ಣು ಮುಕ್ಕಿದಾರ ನನ್ನಿಂದ

ಮಹಿಷ ಶುಂಭ ನಿಶುಂಭ ರಕ್ತಬೀಜ
ಸಂಹಾರ ಆದದ್ದು ಯಾರಿಂದಾ
ಆದಿಶಕ್ತಿಯೆಂಬ ಬಿರುದನು ಧರಿಸಿ
ಜಗದೊಳು ಆದೆನು ಪ್ರಸಿದ್ಧ" ೨೮

ಪೌರಾಣಿಕ ಕಥೆಯಾದ ಈ ಕಾವ್ಯದಲ್ಲಿ ಸ್ತ್ರೀಯರ ಹಕ್ಕು ಮತ್ತು ತಮ್ಮ ಅಧಿಕಾರದ ಬಗ್ಗೆ ಹೇಳುವಾಗ ಮಹಿಳಾ ಶಕ್ತಿಯ ಪ್ರದರ್ಶನವನ್ನು ತಿಳಿಬಹುದಾಗಿದೆ. ಮಾತೃಪ್ರಧಾನ ಕುಟುಂಬವಾಗಿರುವ ಬುಡಕಟ್ಟು ಸಂಸ್ಕೃತಿಯು ಮಹಿಳೆಗೆ ದೇವತೆ, ಶಕ್ತಿಯ ಸ್ಥಾನದಲ್ಲಿ ಕೂರಿಸಿ ಆಚರಿಸುವ ಕಾವ್ಯ ಕಟ್ಟಿ ಹಾಡುವ ಸಾಮೂಹಿಕ ಗಾಯನ ಅಥವಾ ವಾಚನ ಮಾಡುವ ಕಾವ್ಯವಾಗಿದೆ. ಈ ಕಾವ್ಯವು ದುಷ್ಟ ಶಕ್ತಿಯಾದ ಹಿಣ್ಯಾಕ್ಷ ಹಿರಣ್ಯಕಶಪರ ಸಂಹಾರ ಮಾಡಿದ್ದು, ಮಹಿಷಾಸುರನ ಸಂಹರಿಸಿದ ದೇವಿ ಮಾತಾ ಸ್ವರೂಪಿಯಾಗಿ ನಿರ್ಮಿತಿಗೊಂಡಿದ್ದಾಳೆ. ಮೌಖಿಕ ಪರಂಪರೆಯಲ್ಲಿ ಸಮೂಹಕ್ಕೆ ಹೆಚ್ಚು ಪ್ರಾಧಾನ್ಯತೆ ಇದ್ದು, ಗುಂಪು ಸಮುದಾಯಗಳ ಸಮಷ್ಟಿ ಶಕ್ತಿಯ ಪ್ರದರ್ಶನವಿದೆ. ಸಮುದಾಯದಲ್ಲಿ ಪರಸ್ಪರ ಸಹಕಾರ, ಸಂಪರ್ಕ, ಸಹಭಾಗಿತ್ವವು ಕಂಡು ಬರುತ್ತದೆ. ಸಮೂಹದ ಒಗ್ಗಟ್ಟು ಸಮುದಾಯದ ಯಜಮಾನ್ಯದಲ್ಲಿ ಅಡಕವಾಗಿರುತ್ತದೆ. ಇಡೀ ಸಮುದಾಯದ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ.

ಈ ಪೌರಾಣಿಕ ಕಥೆಯ ವೈಕುಂಠದಲ್ಲಿ ಲಕ್ಷ್ಮಿ ನಾರಾಯಣರ ಮಧ್ಯೆ ನಡೆಯುವಂತಹ ವಾದವಾಗಿದೆ. ಇದನ್ನು ನಾರದ ಕೇಳಿಸಿಕೊಂಡು ಇವರ ಮಧ್ಯೆ ನ್ಯಾಯ ತೀರ್ಮಾನ ಹೇಳಲು ಮಧ್ಯೆ ಪ್ರವೇಶಿಸುತ್ತಾನೆ. ವಿಷ್ಣು ಲಕ್ಷ್ಮಿಯರು ಮಾಡಿದ ಕೀರ್ತಿಯ ಕೇಳುತ್ತಾನೆ. ಇವರ ಕೀರ್ತಿ ಕೇಳಿ ಹುಸಿನಗೆ ನಗುತ್ತಾನೆ. ವಿಷ್ಣುವಿಗೆ ಸಹಾಯ ಮಾಡಿದ ಸುದರ್ಶನ ಚಕ್ರದ ಪ್ರಶಂಸಿಸಿ ಇದರ ಸಹಾಯದಿಂದ ದೈತ್ಯರೆಲ್ಲರ ಕೊಂದ ಕಥೆ ಹೇಳುತ್ತಾನೆ. ಈ ಕಥೆಯಲ್ಲಿ ಸಿಟ್ಟಿಗೆದ್ದ ವಿಷ್ಣು ಚಕ್ರಕ್ಕೆ ಭೂಲೋಕದಾಗ ಮಾನವನಾಗಿ ಹುಟ್ಟು ಎಂದಾಗ ಸಾವಿರ ಭುಜಗಳ ಕಾರ್ತವೀರನಾಗಿ ಜನಿಸುವನು. ಆಗ ಕೈಲಾಸಪತಿಯು ಪಾರ್ವತಿಸಹಿತ ಭೂಲೋಕದಲ್ಲಿ ಬಂದು ರಾಮಶೃಂಗ ಪರ್ವತದೊಳಗೆ ಜಮದಗ್ನಿಯಾಗಿ, ಹಣೆಯಲ್ಲಿ ಕಣ್ಣು ಧರಿರಿ ತಪಸ್ಸು ಮಾಡುವನು.

"ಭರತಖಂಡದ ಉತ್ತರ ಭಾಗದಿ
ಕಾಶ್ಮೀರವೆಂಬ ಉತ್ತರ ಭಾಗದಿ
ರೇಣುಕನೆಂಬ ಅರಸನು ಇರುವನು
ಕಾಳಿಕಾದೇವಿಯ ಭಕ್ತನು
ಅರಸನ ಭಕ್ತಿಗೆ ಮೆಚ್ಚಿ ಕಾಳಿಕಾ
ಕೊಟ್ಟಾಳ ಪುತ್ರಿಯ ದಾನವನು
ಪಾರ್ವತ ದೇವಿಯು ಜನಸಿ ಬಂದಳು
ರೇಣುಕೆಯೆಂಬ ನಾಮದಲಿ" ೨೯

ಕಾಶ್ಮೀರದ ರೇಣುಕಾ ರಾಜನ ಮಗಳಾಗಿ ರೇಣುಕೆಯು ಜನಿಸುತ್ತಾಳೆ. ಇವಳನ್ನು ರೇಣುಕ ರಾಜನು ಬಹಳ ಅಕ್ಕರೆ ಕಾಳಜಿಯಿಂದ ಬೆಳೆಸುತ್ತಾನೆ. ರೇಣುಕೆ ಸುಖವಾಗಿ ಯಾವುದೇ ಕೊರತೆಗಳಿಲ್ಲದೆ

ಬೆಳೆಯುತ್ತಾಳೆ. ಅವಳಿಗೆ ತಕ್ಕ ವರ ಸಿಗದಿದ್ದ ಕಾರಣ ಚಿಂತಿಸುತ್ತಾರೆ. ಒಂದು ದಿನ ನಾರದನು ರೇಣುಕೆಗೆ ತಕ್ಕ ವರ ಜಮದಗ್ನಿ ಎಂದು ಹೇಳಿದಾಗ ರೇಣುಕ ರಾಜನು ಜಮದಗ್ನಿಯ ಹತ್ತಿರ ಬಂದು ರೇಣುಕೆಯನ್ನು ವಿವಾಹವಾಗುವ ವಿಚಾರ ಹೇಳುತ್ತಾನೆ. ಆಗ ಜಮದಗ್ನಿಯು ಗಾಂಧರ್ವ ವಿವಾಹ ಆಗಲು ತಿಳಿಸುತ್ತಾನೆ.

"ತೆಲಿಗೆ ಎಣ್ಣಿ ಹಚ್ಚಿ ರೇಣುಕಾ
ಕುಂಡಲ ಸ್ನಾನವ ಮಾಡೆಂದನು
ತರುಣಿ ತೀರ್ಥದಿ ಸ್ನಾನ ಆದಮ್ಯಾಲ
ಎಣಿಗೊಂಡ ಅಂತ ಕರೆದಿಹನು
ಗಾಂಧರ್ವ ವಿಧಿಯಂತೆ ಲಗ್ನ ಆದಮ್ಯಾಲ
ಸುಖದಿಂದ ಸಂಸಾರ ನಡೆಸಿದನು
ಸುಲೋಚನ ಉಲೋಚನ ಬ್ರಿಲ್ಲೋಚನ ರಾಮ
ನಾಲ್ವರು ಮಕ್ಕಳ ಪಡೆದಿಹನು" [೩೦]

ರೇಣುಕಾ ಜಮದಗ್ನಿಯರ ವಿವಾಹವು ಗಾಂಧರ್ವ ವಿವಾಹವಾಗಿ ಅವರಿಗೆ ನಾಲ್ವರು ಮಕ್ಕಳು ಸಹ ಜನಿಸುತ್ತವೆ. ಸಾಕ್ಷಾತ್ ವಿಷ್ಣುವು ಜಮದಗ್ನಿ ಮತ್ತು ರೇಣುಕೆಯರಿಗೆ ರಾಮನಾಗಿ ಜನಿಸುತ್ತಾನೆ. ಜನನಿ ಜನಕರ ಇಷ್ಟದಂತೆಯೇ ಸಕಲ ವಿದ್ಯೆಗಳ ಪಡೆಯುತ್ತಾನೆ. ಒಂದು ದಿವಸ ತಂದೆಗೆ ನಾನು ವಿಂಧ್ಯಾದ್ರಿ ಪರ್ವತಕ್ಕೆ ತಪಸ್ಸಿಗೆ ಹೋಗುವುದಾಗಿ ಕೇಳಿ ಅಪ್ಪಣೆ ಪಡೆದು, ಏಕಾಗ್ರತೆ ಕಠಿಣ ತಪಸ್ಸಿನಿಂದ ನೀಲಕಂಠನನ್ನು ಒಲಿಸಿಕೊಳ್ಳುತ್ತಾನೆ. ತಪಸ್ಸಿಗೆ ಒಲಿದ ಶಿವನು ಏನು ವರಗಳ ಬೇಡುವೆ ಕೇಳು ಎಂದಾಗ ಸಕಲ ವಿದ್ಯೆಗಳು, ಒಂದು ಪರಶು, ಒಂದು ಧನಸ್ಸು ಕೇಳುತ್ತಾನೆ. ಆಗ ಶಿವನು ನೀನು ಇಂದಿನಿಂದ ಪರಶುರಾಮ ಎಂದು ವರವ ಪಾಲಿಸುತ್ತಾನೆ. ಧನಸ್ಸು ಮುರಿದರೆ ನಿನ್ನ ಅವತಾರ ಮುಗಿಯುತ್ತದೆ ಎಂದು ಶಿವ ಹೇಳುತ್ತಾನೆ. ಶಿವನಿಂದ ವರಗಳ ಪಡೆದ ಪರಶುರಾಮನು ಸಹ್ಯಾದ್ರಿ ಪರ್ವತಕ್ಕೆ ಬಂದನು. ಸಕಲ ವಿದ್ಯಕ್ಕೆ ಅಧಿಪತಿಯಾದ ಗಣಪತಿಯು ಅಲ್ಲಿ ವಾಸ ಮಾಡುತ್ತಿದ್ದನು. ಅಲ್ಲಿ ಗಜಾನನನಿಗೆ ನನಗ ಸಕಲ ವಿದ್ಯೆ ಕಲಿಸೆಂದು ಬೇಡಿದನು. ಆಗ ಗಜಾನನ ಒಪ್ಪಿ ವಿದ್ಯೆ ಕಲಿಸುತ್ತಾನೆ. ಅಲ್ಲೇ ವಿದ್ಯೆ ಕಲಿಯುತ್ತಾ ಉಳಿಯುತ್ತಾನೆ.

ರೇಣುಕಾದೇವಿಯು ಮಲಪ್ರಭ ನದಿಯ ನೀರನ್ನು ಸೂರ್ಯನಿಲ್ಲದ ಸಮಯದಲ್ಲಿ ಹಾವನ್ನು ಸಿಂಬೆ ಮಾಡಿ ಮರಳ ಕೊಡ ಮಾಡಿ ತರುತ್ತಿದ್ದಳು. ಆ ನೀರಿನಿಂದ ಜಮದಗ್ನಿಯು (ಆಚಮನ) ಅಂಗೈಗುಳಿಯಲ್ಲಿ ಶುದ್ಧೋದಕವನ್ನು ಮಂತ್ರ ಪೂರ್ವಕವಾಗಿ ಕುಡಿಯುತ್ತಿದ್ದನು. ಒಮ್ಮೆ ಬೆಳಕು ಆಗಿದೆ ಎಂದು ರಾತ್ರಿಯ ಸಮಯದಲ್ಲಿ ಮಲಪುರಿ ದಾರಿ ಹಿಡಿದು ಬಂದು ನದಿ ದಂಡಿಲೆ ನಿಂತು ಅಲ್ಲಿ ಗಂಧರ್ವ ಸ್ತ್ರೀಯರನು ಕಂಡು ಅಲ್ಲಿ ಚಿತ್ರರಥ ಮತ್ತು ಗಂಧರ್ವ ಕನ್ಯೆಯರ ಚೆಲ್ಲಾಟ ನೋಡಿ ಚಂಚಲ ಮನವಾಗುತ್ತಾಳೆ. ನಾನು ತಂದೆಯ ಮನೆಯಾಗೆ ಇಂತಹ ವೈಭವ ಕಾಣಲಿಲ್ಲವಲ್ಲ ಎಂದುಕೊಳ್ಳುತ್ತಾಳೆ. ಆಗ ಸಿಂಬೆಯಾಗಿದ್ದ ಹಾವು ಹರಿದು ಹೋಯಿತು. ಮರಳಿನ ಕೊಡ ಮಣ್ಣಾಗ ಸೇರಿತು.

ಈ ಘಟನಾವಳಿಗಳು ಹೆಣ್ಣಿನ ಮನಸ್ಥಿತಿ ಎಷ್ಟು ಗಟ್ಟಿ ಅದು ಸೂಕ್ಷತೆಯಿಂದ ಕಾರ್ಯ ನಿರ್ವಹಿಸುವ

ಬಗೆಯನ್ನು ತಿಳಿಯಬಹುದಾಗಿದೆ. ಉರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯು ಸ್ತ್ರೀಯನ್ನು ಯಾವ ರೀತಿಯಾಗಿ ತನ್ನ ಕಪಿಮುಷ್ಠಿಯಲ್ಲಿ ಇರಿಸಿಕೊಂಡಿದೆ ಇದು ಪೌರಾಣಿಕ ಕಾಲದಿಂದಲೂ ಸಹ ಇಂತಹ ಪುರುಷ ಪ್ರಾಧಾನ್ಯತೆಯ ಸ್ತ್ರೀಯರ ಮೇಲೆ ಸವಾರಿ ಮಾಡಿರುವುದನ್ನು ನೋಡಬಹುದಾಗಿದೆ. ಇಂತಹ ಸಂದರ್ಭದಲ್ಲಿ ಜಮದಗ್ನಿಯು ನೀರು ತರದ ತನ್ನ ಪತ್ನಿಗೆ ಶಾಪವನ್ನು ಈ ರೀತಿಯಾಗಿ ವಿಧಿಸುತ್ತಾನೆ.

"ಕೊಡ ಸಿಂಬಿ ಎಲ್ಲಿ ಇಟ್ಟಿದಿ
ಮನದಾಗ ಮಾಡಿದಿ ಏನೇನು
ಕುಷ್ಟರೋಗ ನಿನಗೆ ತಾಗಲಿ ಎಂದು
ಕೋಪದಿ ಕೊಟ್ಟಾನು ಶಾಪವನು
ತಿರುಗುತ ಸೇರ್‍ಯಾಳ ಅಡವಿಯನು
ಜೋಗುಳಬಾವಿ ಸತ್ಯವನ್ನತ್ತರ
ಕಂಡ ಒಂದು ಕುಟಿರವನು" ೩೧

ಕೋಪಿಷ್ಟ ಜಮದಗ್ನಿಯು ರೇಣುಕಾದೇವಿಗೆ ಕುಷ್ಟರೋಗ ಬರಲೆಂದು ಶಾಪ ವಿಧಿಸುತ್ತಾನೆ. ಆಗ ರೇಣುಕಾದೇವಿಯು ತಿರುಗುತ್ತಾ ಅಡವಿಯನ್ನು ಸೇರುತ್ತಾಳೆ. ಅಲ್ಲಿ ಜೋಗುಳಬಾವಿ ಸಮೀಪದ ಕುಟೀರ ಅಲ್ಲಿ ಯಕ್ಕಯ್ಯ ಜೋಗಯ್ಯ ಅಣ್ಣ ತಮ್ಮಂದಿರ ಕಾಣುತ್ತಾಳೆ. ಅವರು ಸವದತ್ತಿ ಅರಸರು. ಅವರು ತಮ್ಮ ರಾಜ್ಯವನ್ನು ತ್ಯಾಗ ಮಾಡಿ ಆಶ್ರಮವನ್ನು ಕಟ್ಟಿಕೊಂಡಿದ್ದಾರೆ. ಅಲ್ಲಿಗೆ ರೇಣುಕಾದೇವಿಯು ಹೋಗಿ ಅವರ ಸೇವೆಯನ್ನು ಮಾಡುತ್ತಿರಲು, ಋಷಿಗಳು ಅವಳ ಸೇವೆಗೆ ಮೆಚ್ಚಿ ಉದ್ಧಾರ ಮಾಡುವ ಕಾಲಕ್ಕೆ ಎಂದು ಹೇಳುತ್ತಾ

"ಕಲಿಯುಗದಲ್ಲಿ ಯಲ್ಲಮ್ಮನೆಂದು
ಕರೆಯುವರೋ ನಿನ್ನನು ಭಕ್ತರು
ನಿನ್ನ ಭಕ್ತರಿಗೆ ನಮ್ಮಯ ಬಿರುದು
ಬೇಕೆಂದು ಯಕ್ಕಯ್ಯ ಹೇಳಿದನು" ೩೨

ಎಂದು ಯಲ್ಲಮ್ಮದೇವಿಯ ಭವಿಷ್ಯದ ಬಗ್ಗೆ ಯಕ್ಕಯ್ಯನ ಜೋಗಯ್ಯರು ಹೇಳುತ್ತಾರೆ. ಮುಂದೆ ಯಲ್ಲಮ್ಮಳಾಗಿ ಭಕ್ತರು ಬೇಡಿದ ವರಗಳ ಈಡೇರಿಸುವಂತ ದೇವಿಯಾಗಿ ಜನಪ್ರಿಯತೆ ಗಳಿಸುತ್ತಾಳೆಂದು ಹೇಳುತ್ತಾರೆ. ರೇಣುಕಾ ದೇವಿಗೆ ಬಂಡಾರ ಚೀಲ ಕೊಡುತ್ತಾರೆ. ಅವರ ಇಷ್ಟದಂತೆ ದೇವಿಯು ನಡೆದುಕೊಳ್ಳುತ್ತಾಳೆ. ದೇವಿಯ ಭಕ್ತರು ಬಂಡಾರ ಚೀಲ ಧರಿಸಿ ಉಧೋ ಉಧೋ.. ಎಲ್ಲಮ್ಮ ಎನ್ನುತ್ತಾ ಸಂಚಾರ ಮಾಡುತ್ತಾರೆ. ಮನೆ ಮನೆ ಬೇಡಿ ನೀಡಿ ಜನರ ಮನೆಬಾಗಿಲಿಗೆ ಬಂದು ಬಂಡಾರ ಹಚ್ಚುತ್ತಾರೆ. ಜನರು ನೀಡಿದ ಕಾಣಿಕೆ ಸ್ವೀಕರಿಸಿ ಭಕ್ತರಿಗೆ ಶುಭಹಾರೈಸುತ್ತಾರೆ. ಬಂಡಾರವು ವೈಜ್ಞಾನಿಕವಾಗಿ ರೋಗ ನಿರೋಧಕ ಶಕ್ತಿ ಹೊಂದಿದ್ದು ಪ್ರಸ್ತುತ ಸಂದರ್ಭದಲ್ಲಿ ಆ ಬಂಡಾರಕೆ ಕಲಬೆರಕೆ ಹೆಚಾಗಿ ಮಾನವನ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುವುದನ್ನು ಕಾಣುತ್ತೇವೆ.

ಯಕ್ಕಯ್ಯ-ಜೋಗಯ್ಯರ ಸಲಹೆಯಂತೆ ಯಲ್ಲಮ್ಮ ಬಂಡಾರ ಚಿಲ ಹಿಡಿದು ಗಂಡನ ಹತ್ತಿರ

ಬರುತ್ತಾಳೆ. ಗಂಡನ ಪಾದ ಗಟ್ಟಿಗೆ ಹಿಡಿಯುತ್ತಾಳೆ. ಜಮದಗ್ನಿ ಋಷಿಯು ಸಿಟ್ಟಿಗೇರುತ್ತಾನೆ. ಮೂರು ಮಕ್ಕಳ ಕರೆದು ರೇಣುಕೆಯ ರುಂಡವನ್ನು ತೆಗೆಯಿರಿ ಎಂದು ಹೇಳುತ್ತಾನೆ. ಇದು ಶಿಕ್ಷೆ ವಿಧಿಸುವ ಪರಿಯಾಗಿದ್ದು ಪೌರಾಣಿಕ ಕಾಲದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯು ಹೇಗೆ ತನ್ನ ಅಧಿಕಾರವನ್ನು ಸಾಧಿಸುತ್ತಿತ್ತು ಎಂದು ತೋರುತ್ತದೆ. ಕಾಲಾಂತರದಲ್ಲಿ ಅದು ಮಾತೃ ಪ್ರಧಾನ ವ್ಯವಸ್ಥೆಗೆ ತಿರುಗಿದ್ದನ್ನು ಕಾಣಬಹುದಾಗಿದೆ. ಮೊದಮೊದಲು ಸ್ತ್ರೀ ಆಹಾರ, ಮಕ್ಕಳ ಪಾಲನೆ-ಪೋಷಣೆ ಕಾರ್ಯದಲ್ಲಿ ತೊಡಗಿದ್ದು ಕಾಲ ಕ್ರಮೇಣ ತನ್ನ ಅಧಿಕಾರ ಸಮಾಜದ ಎಲ್ಲ ಕ್ಷೇತ್ರಗಳಿಗೂ ವಿಸ್ತರಿಸಿರುವುದನ್ನು ನಾವು ಕಾಣಬಹುದಾಗಿದೆ.

ಜಮದಗ್ನಿಯು ತನ್ನ ಮೂರು ಮಕ್ಕಳಿಗೆ ರೇಣುಕೆಯ ರುಂಡ ತೆಗೆಯಲು ಹೇಳಿದಾಗ ಒಪ್ಪದ ಮಕ್ಕಳನ್ನು ಸುಟ್ಟು ಬೂದಿಯಾಗಿ ಮಾಡಿದನು. ನಂತರ ಜಮದಗ್ನಿಯು ಪರಶುರಾಮನ ನೆನಸಿ ಮನೆಗೆ ಬರಲು ಹೇಳುತ್ತಾನೆ. ಮನೆಗೆ ಬಂದ ಪರಶುರಾಮನಿಗೆ ರೇಣುಕೆಯ ರುಂಡ ಕಡಿಯಲು ಹೇಳುತ್ತಾನೆ. ಆ ಮಾತಿಗೆ ಎದುರು ಮಾತಾಡದೆ ಕಾರ್ಯ ನಿರ್ವಹಿಸುತ್ತಾನೆ. ಆಗ ಜಮದಗ್ನಿ ಏನ ಬೇಡುವೆ ಕೇಳು ಎಂದಾಗ ತನ್ನ ತಂದೆಗೆ ಎನ್ನ ಅಣ್ಣಂದಿರ, ತಾಯಿಯ ಪ್ರಾಣವ ಬೇಡುತ್ತಾನೆ. ಅದರಂತೆ ಜಮದಗ್ನಿ ವರವ ಪಾಲಿಸುತ್ತಾನೆ. ಕಾಲಕ್ರಮೇಣ ಸುಖವಾಗಿರುತ್ತಾರೆ. ಈ ವರವ ಬೇಡುವುದು ಮತ್ತು ನೆರವೇರಿಸುವುದು ಪರಿಯು ಅನಾದಿ ಕಾಲದಿಂದಲು ಇದ್ದು ಅದು ಮೆಚ್ಚುಗೆ, ಹೇಳಿದ ಕಾರ್ಯದ ಸಾಧನೆ, ತಪಸ್ಸುಗಳಿಗೆ ಮೆಚ್ಚಿದ ದೇವಾನು ದೇವತಾ ಪುರುಷ ಸ್ತ್ರಿ ದೇವತೆಗಳು ನೀಡುವುದಾಗಿದೆ. ಈ ಕಲ್ಪನೆಯು ಜನಪದರ ಬಹುನಂಬಿಕೆಗಳಾಗಿದ್ದು, ದೇವರ ಇರುವಿಕೆಯ ಬಗ್ಗೆ ಪವಾಡ ಪುರುಷರ ಬಗ್ಗೆಗಿನ ನಂಬಿಕೆ ಇದಾಗಿದೆ.

ಒಂದು ದಿನ ಕಾತ್ವೀರನೆಂಬ ಅರಸನು ಬೇಟೆಯಾಡುತ್ತಾ ಜಮದಗ್ನಿ ಪಾದವ ನೆಮಿಸಾನು, ನಮಿಸಿ ಕಾಮಧೇನು ಒಂದ ನೋಡಿ ಕೊಡೆಂದು ಕೇಳಿ ಜಮದಗ್ನಿಯ ಪ್ರಾಣವ ಹೀರಿದನು. ಧಾವಿಸಿ ಪರಶುರಾಮ ಬಂದ. ತಂದೆಯ ಮೈಯಾಗಿನ ಗಾಯವ ನೋಡಿ ಅವುಗಳನ್ನು ಎಣಿಸುತ್ತಾನೆ. ಒಂದು ಗಾಯಕ್ಕೆ ಒಬ್ಬರಂತೆ ಒಟ್ಟು ಇಪ್ಪತ್ತೊಂದು ಜನ ಕ್ಷತ್ರಿಯರನ್ನು ಕೊಂದನು. ಯುದ್ಧದಲ್ಲಿ ಕಾರ್ತವೀರನನ್ನು ಕೊಂದನು. ಈ ಘಟನೆಯ ಪ್ರತೀಕವಾಗಿ ಎಂಬಂತೆಯೇ.. ಜಮದಗ್ನಿ ಋಷಿಯ ಸತ್ತ ದಿವಸವೇ ಹುಣ್ಣಿಮೆ ಇದ್ದುದರಿಂದ ಅದಕ್ಕೆ ಮುಂದೆ ಕಲಿಯುಗದಲ್ಲಿ ರಂಡಿ ಹುಣ್ಣಿಮೆ ಎಂದು ಕರೆಯುತ್ತಾರೆ. ಇದು ಇಂದಿಗೂ ಆಚರಣೆ ಮಾಡುವುದನ್ನು ಸವದತ್ತಿ ಜಾತ್ರೆ ನಡೆಯುವುದನ್ನು ನಾವು ನೋಡಬಹುದಾಗಿದೆ. ಮುಂದೆ ಪರಶುರಾಮನು ತಂದೆಯ ಪ್ರಾಣವನ್ನು ಮರಳಿ ಪಡೆದುದಕ್ಕೆ ಮುತ್ತೈದೆ ಹುಣ್ಣಿಮೆ ಎಂದು ಆಚರಿಸುತ್ತಾ ಬಂದಿದ್ದಾರೆ. ರಂಡಿ ಹುಣ್ಣಿಮೆಗೆ ಮತ್ತು ಮುತ್ತೈದೆ ಹುಣ್ಣಿಮೆಗೆ ಮುರು ತಿಂಗಳು ಎಂದು ಹಿರಿಯರ ನಂಬಿಕೆಯಾಗಿದೆ. ತಂದೆ-ತಾಯಿಗೆ ಪರಶುರಾಮ ಸುಖವಾಗಿ ಸ್ವರ್ಗಕ್ಕೆ ಹೊಗಿರೆಂದು ಹಾರೈಸುತ್ತಾನೆ. ತಾಯಿ ತನ್ನ ಭಕ್ತರ ಮತ್ತು ಪರಶುರಾಮನ ಬಿಟ್ಟಿರಲಾರೆ ಹೋಗಲಾರೆ ಸ್ವರ್ಗಕ್ಕೆ ಎಂದಾಗ ಪರಶುರಾಮನು ತನ್ನ ತಾಯಿಗೆ ನಿನ್ನ ಭಕ್ತರ ರಕ್ಷಿಪೆನೆಂದು ವಚನವ ನೀಡಿದನು. ಈ ಕೆಲಸ ಮಾತ್ರ ಆಗಲಾರದೆಂದಾಗ ನಿನ್ನ ಸಲ್ಲು ನನಗೆ ಬ್ಯಾಡ ನನ್ನ ಸಲ್ಲು ನಿನಗ ಬ್ಯಾಡ ಎಂದು ಅಲ್ಲಿಂದ ಹೊರಟನು. ಈ ಕತೆಯ ಕೇಳಿದವರಿಗೆ, ಹೇಳಿದವರಿಗೆ ಪುಣ್ಯ ಫಲವು ಬರುತ್ತದೆ ಎಂದು ಕಾವ್ಯದ ಆಶಯವಾಗಿದೆ.

ಅಪ್ಪಾನ ತೊರೆ ಎಂಬ ರೇಣುಕ ಎಲ್ಲಮ್ಮ ಕಥನ ಗೀತೆಯ ಒಂದು ಭಾಗ ಈ ಕೆಳಗಿನಂತಿದೆ.

"ತಾನಂದನನ್ನೊ ಎಲಿ ತಂದನ್ನಾನೋ
ತಾನೇ ಬಂದಳು ದೇವಿ ತಾನಂದನೋ
ಮಂಡಿಗೆ ಮುಂಡಾಸ ತುಂಡಿಗೆ ಸುರಾಯಿ
ಸೆಂಡು ಆಡ್ಯಾನೋ ತನ್ನ ವೈರಿಗಳಾ
ಆಡು ಮಕ್ಕಳಕಡೆ ತೂಗೋ ತೊಟ್ಟಿಲಕೊಡೆ
ಬಾಗ್ಯೇವ ಕೊಡೆ ನಿನ ಬಗತರಿಗೆ
ವೋದಲ್ಲಿ ಬಂದಲ್ಲಿ ನಿಂತಲ್ಲಿ ಕುಂತಲ್ಲಿ
ಮತ್ತೆ ರಾಮಯ್ಯನ ದಯವಿರಲೋ" [೩೩]

ಯಲ್ಲಮ್ಮ ದೇವಿಯ ಭಕ್ತರು ತಾಯಿಯ ಕಥನ ಕಾವ್ಯ ಹಾಡುವಾಗ ಆರಾಧಕರಿಗೆ ಭಕ್ತರಿಗೆ ತಾಯಿಯ ಆರ್ಶಿವಾದ ಇದ್ದೇ ಇರುತ್ತದೆ. ದೇವಿಗೆ ಭಕ್ತಿಯ ತಮ್ಮ ಆರಾಧನೆ ಭೂಮಿ, ಆಕಾಶ, ಪ್ರಕೃತಿಗೆ ನಮಿಸಿ ಪರಶುರಾಮನು ಚಿಕ್ಕವನಿದ್ದಾಗ ನಡೆಯುತ್ತಿದ್ದ ಕಾರ್ಯ ಸಾಧನೆಗಳ ಬಗ್ಗೆ ಹೇಳುತ್ತಾರೆ. ಬುಗರಿ ಆಟದಲ್ಲಿ ಮುನ್ನೂರ ಐವತ್ತು ಹುಡುಗರಲ್ಲಿ ಇವನೇ ಚೂಟಿಯಾಗಿದ್ದಾನೆ. ಬುಗರಿಯು ಹುಡುಗರ ಕಾಲಿಗೆ ತಗುಲಿ ರಕ್ತ ಬಂದಿತು. ಆಗ ಹುಡುಗರು ಹೀಯಾಳಿಸುತ್ತಾರೆ. ಮಿಂಡ್ರಿಗೆ ಹುಟ್ಟಿದವನಿಗೆ ಈ ಬುದ್ಧಿ ಇರೋದು ಎಂದು ಕಾಡಿಸುತ್ತಾರೆ. ಬಲರಾಮನ ಬಂಗಾರದ ಬುಗರಿ ಬೆಳ್ಳಿ ಚಾವಟಿ ಬಿಸೆವಗದು ಓಡಿ ಬಂದು ಪಟ್ಟೆ ಮಂಚದ ಮ್ಯಾಲೆ ಅಂಗಾತ ಮಲಗುತ್ತಾನೆ. ಆಗ ತಾಯಿಯು ಈ ರೀತಿಯಾಗಿ ಹೇಳುತ್ತಾಳೆ.

"ಬಾರೋ ಬಾರೋ ಪರಶುರಾಮಯ್ಯ
ನನ್ನೆದಿಯಾ ಆಲು ಕುಡಿಯಾ ಬಾರೋ
ನಿನ್ನೆದಿಯಾ ಆಲು ಏಳುಕಂಡುಗವೇ
ವಲ್ಲೆವಲ್ಲೆ ವೊಯ್ಮಾಲಿಯಾಲೆ ವಲ್ಲೆ
ವಲ್ಲೆ ವಲ್ಲೆ ವೊಯ್ಮಾಲಿಯಾಲೇ ವಲ್ಲಿ
ವಲ್ಲೆ ವಲ್ಲೆ ವೊಯ್ಮಾಲಿಯಾಲೇ
ಬೇಗಾನೆ ತೋರೆ ನಮ್ಮ ತಂದೇನಾ
ತಂದೇನಾ ತೊರದಿದರೆ ನೋಡು
ಮನಗೀಸಿ ಕೊರಳನಾಕಯ್ವ" [೩೪]

ತನ್ನ ಸ್ನೇಹಿತರಿಂದ ಅವಮಾನಿತನಾದ ಬಲರಾಮನು ತಾಯಿಯ ಯಾವ ಸಮಾಧಾನಕರ ಮಾತಿಗೂ ಮಣಿಯದೇ ತಂದೆಯ ತೋರಿಸು ಇಲ್ಲವಾದರೆ ನಿನ್ನ ಕೊರಳ ಕೊಯ್ಯುವೆ ಎನ್ನುತ್ತಾನೆ. ಇದು ಸಾಮಾಜಿಕ ವ್ಯವಸ್ಥೆಯಲ್ಲಿ ತಂದೆ ಇಲ್ಲದ ಮಗು, ತಾಯಿಯಿಲ್ಲದ ಮಕ್ಕಳ ಸ್ಥಿತಿಯೂ ಇದೇ ರೀತಿ ಇರುವುದನ್ನು ಕಾಣಬಹುದಾಗಿದೆ. ರೇಣುಕೆ ತನ್ನ ಮಗನ ಪ್ರಶ್ನೆಗೆ ಉತ್ತರಿಸಲಾಗದೆ, ಇಲ್ಲದ ತಂದೆಯ ನಾನೆಲ್ಲಿ ತೋರಿಸಲಿ ರಘುರಾಮ ಎನ್ನುತ್ತಾಳೆ.

"ಯಾರಂಡೆ ನಿನಗೆ ಏಳ್ಯಾಳ ಈ ಮಾತ
ಅಲ್ಕ ಸಲ್ಕದ ಮಾತು ಮುಚ್ಚಿದೆ ಗಯ್ಯಾಳಿ
ಅಪ್ಪಾನೆ ನೊರೆ ಈ ಸಬೆಯಲ್ಲಿ" ೩೫

ಯಾವ ರಂಡೆಯು ನಿನಗೆ ಹೀಗೆ ಹೇಳಿದಳು ಎಂದು ಕೇಳಲು, ಪರಶುರಾಮ ತಾಯಿಗೆ ಗಯ್ಯಾಳಿ ಅಪ್ಪಾನ ತೋರಿಸು ಎಂದು ಕೇಳುತ್ತಾನೆ. ಗಂಡ ಇಲ್ಲದವರಿಗೆ ಮಗು ಯಾಕಮ್ಮ, ಗಂಧದ ಗುಡಿಯ ಯಲ್ಲಮ್ಮ ಈಗಲೇ ಇಷ್ಟು ಮೆರೀತೀಯ ಗಂಡ ಇರದಿದ್ದರೆ ಎಷ್ಟು ಮೆರೀತಿದ್ದೆ ಎಂದೆಲ್ಲ ಕಾಡಿಸುತ್ತಾನೆ. ಇಲ್ಲದ ತಂದೆಯ ನಾನೆಲ್ಲಿ ತೋರಿಸಲಿ ಎಂದು ಎಷ್ಟು ಪರಿಪರಿಯಾಗಿ ಬೇಡಿದರೂ

"ಆಕಾಶಕ್ಕೆ ಜೊಡುಂಟು ಭೂಮಿಗೆ ಜೋಡುಂಟು
ನಿನ್ನಾಗೆ ಜೋಡು ಇಲ್ಲವೇನೆ ತಾಯಿ
ಅಕ್ಕಿಗೆ ಜೋಡುಂಟು ಪಕ್ಸಿಗೆ ಜೋಡುಂಟು
ನಿನ್ನಾಗೆ ಜೋಡು ಇಲ್ಲವೇನೆ ತಾಯಿ" ೩೬

ಸಮಾಜದೊಳಗೆ ಪ್ರಾಣಿ ಪಕ್ಷಿ, ಅಕ್ಕಿ–ಪಕ್ಸಿ, ಕೂರ್ಗಿ–ಮಡಕೆ ಮೊದಲಾಗಿ ಅನೇಕ ರೀತಿಯಾಗಿ ಒಂದಲ್ಲಾ ಒಂದು ರೀತಿಯಾಗಿ ಜೋಡಿಗಳಾಗಿವೆ ಹಾಗೆಯೇ ನಿನಗೆ ಜೋಡಿಲ್ಲವೇ. ಜೋಡಿಲ್ಲದೆ ನನ್ನ ಜನನ ಹೇಗೆ ಆಯಿತು ನನ್ನ ತಂದೆಯ ತೋರಿಸು ಎಂದು ಕಾಡುವ ಪರಿಯು ಹಾದರ ಮಾಡಿ ಮಕ್ಕಳ ಪಡೆದ ಜನರಿಗೆ ಕೇಳುವ ಪೀಡಿಸುವ ಸ್ಥಿತಿಯು ಇಲ್ಲಿ ವ್ಯಕ್ತವಾಗಿದೆ. ಇದರಿಂದ ತಪ್ಪಿಸಿಕೊಳ್ಳಲು ಎಲ್ಲಮ್ಮ ಬಾಳೆಯ ತೋಟದಲ್ಲಿ ಬಾಳೆ ದಿಂಡು ತಾಗಿ, ತೆಂಗಿನ ತೋಟದಲ್ಲಿ ತೆಂಗಿನ ಮರವು ತಾಗಿ, ನಿಂಬೆಯ ತೋಟದಲ್ಲಿ ನಿಂಬೆಯ ಗಿಡವು ತಾಗಿ ನಿನ್ನ ಹಡದೇನ ರಘುರಾಮ ಎಂದು ಹೇಳಿದಾಗ ಮತ್ತೆ ಅಮ್ಮ ಮಕ್ಕಳ ಫಲವಿಲ್ಲದವರಿಗೆ ಬಾಳೆ, ತೆಂಗು, ನಿಂಬೆ, ಹೂವು ಮಕ್ಕಳ ಫಲವು ಕೊಡುತ್ತಾವೇನಮ್ಮ ಹಾಗಾದರೆ ಈ ಊರಿನ ಬಂಜೇರು ಕರದುಕೊಂಡು ಬರುವೆ ಅವರಿಗೆ ಮಕ್ಕಳ ಫಲವ ಕೊಡು ಎಂದು ಹೇಳುತ್ತಾನೆ. ಸಾಮಾಜಿಕ ನಿಂದನೆಯ ಸ್ತುತಿಗಳು ಮಹಿಳೆಯು ಅನುಭವಿಸುವ ಸ್ಥಿತಿ ಇಲ್ಲಿ ವ್ಯಕ್ತವಾಗಿದೆ. ತುಂಬಿದ ಸಭೆಯಲ್ಲಿ ಕಾಡುತ್ತಾನೆ. ನಿನ್ನ ಕೊರಳ ಕೊಯ್ಯುವೆ ನನ್ನ ತಂದೆ ತೋರಿಸು ಎನ್ನುತ್ತಾನೆ. ನಿನ್ನ ತಂದೆ ಗುಡ್ಡಕ್ಕೆ ಹೋಗಿದ್ದಾಗ ಕರಡಿ, ಹುಲಿ ತಿಂತೋ ನಾಕಾಣೆ ಎಂದಾಗ ಸುಳ್ಳು ಹೇಳುವೆ ಎಂದು ನೀನು ಸಿದ್ಧರ ಸೂಳೆ ಎಲ್ಲಮ್ಮ ನಿನ್ನ ಮಿಂಡನ್ನಾದರೂ ಬೇಗ ತೋರಿಸ ಅವನನ್ನೇ ಅಪ್ಪಾ ಎಂದು ನಾಕರೆವೆ ಎಂದು ಹೇಳುವ ಪರಿಯು ತಂದೆ ಗೊತ್ತಿಲ್ಲದ ಅನಾಥರ ಸ್ಥಿತಿಯು, ಇಂದಿನ ನಗರೀಕರಣ, ಜಾಗತೀಕರಣ, ಪಾಶ್ಚಾತ್ಯೀಕರಣದ ಪ್ರಭಾವದಿಂದ ಅನಾಥರ ಸ್ಥಿತಿಯು ಬಹು ಹಿಂದಿನ ಕಾಲದಲ್ಲಿ ಈ ಎಲ್ಲಮ್ಮನ ಕಾವ್ಯದಲ್ಲಿ ಚಿತ್ರಿಸಲಾಗಿದೆ.

ಕಾವ್ಯ ಮುಂದುವರೆದು ರೇಣುಕೆ ಪರಶುರಾಮನಿಗೆ ನಿನ್ನ ತಂದೆ ಗೆಜ್ಜೆಯುಡದಾರ ನಿನಗೆ ತರಲೆಂದು ಸಂತೆಗೆ ಹೋಗಿ ಅಲ್ಲಿ ಹೊತ್ತುಮುಣಗಿ ಕತ್ತಲಾಗಿ ದಾರಿ ತಪ್ಪಿ ಹೋದನು. ನಿಮ್ಮ ಅಪ್ಪ ಸತ್ತಿದ್ದಾನೆ ಎಂದು ಹೇಳಿದ್ದಕ್ಕೆ ಬಾಲರಾಮಯ್ಯ ನಮ್ಮ ಅಪ್ಪನ ಸಮಾಧಿ ತೋರಿಸು ಎಂದು ಕೇಳಿದ ಮೇಲೆ ಮಲಗಿಸಿ ಕೂದಲು ಕಿತ್ತು ಹಿಂಸೆ ಮಾಡುತ್ತಾನೆ. ಅಲ್ಲಿ ಇಲ್ಲಿ ಎಳೆದು ಕಳ್ಳೆ ಜೋಡ್ಸಿ ಯಲ್ಲಮ್ಮ

ಮಲಗಿಸಿ ಬೆಂಕಿ ಹಚ್ಚುತ್ತಾನೆ. ಬೂದಿ ಗಂಗೇಲಿ ಬಿಟ್ಟ. ನಂತರ ಯೋಚಿಸಿ ತಂದೆ-ತಾಯಿ ಇಲ್ಲದ ತಬ್ಬಲಿಯಾದೆ ಎಂದು ಪರದೇಸಿ ಆದೆಯಲ್ಲ ಅಂದು ತನ್ನ ತಾಯಿಗೆ ಪರಿಪರಿಯಾಗಿ ಬೇಡಿಕೊಳ್ಳುತ್ತಾನೆ. ನೀನು ಪತಿವ್ರತೆ ನಿನು ಕರಿಯ ಕಲ್ಲಿನ ಮೇಲೆ ಮಳೆಯೆ ತರಿಸಿ ವಡಕಲು ಬೀಜಹಾಕಿ ಬೆಳೆತೆಗೆದ ಸತ್ಯೆವಂತೆ, ಮಾಯಕಾರ್ತಿ ಈ ಸತ್ಯವು ತನ್ನ ಜನನದ ಬಗ್ಗೆ ಅರಿವಾಗಿ ಸತ್ಯವ ತಿಳಿದು ಬೋರು ಬೋರೆಂದಾಡಿ ಅಳುತ್ತಾನೆ.

ಈ ರೀತಿಯಾಗಿ ಈ ಕಥನ ಕಾವ್ಯವು ಪೌರಾಣಿಕ ಹಿನ್ನೆಲೆಯಿಂದ ಸೃಷ್ಟಿಯಾಗಿ ಪ್ರಸ್ತುತ ಸಂದರ್ಭದಲ್ಲಿಯೂ ಹಾಡುವ ಜನರು, ಪಾಲಿಸುವ ಜನರು ಇದ್ದಾರೆ. ಈ ಪೌರಾಣಿಕ ಕಥನ ಕಾವ್ಯವು ವಿಶೇಷ ದಿನಮಾನಗಳಲ್ಲಿ ಶುಭ ಸಮಾರಂಭದ ದಿನಗಳಲ್ಲಿ ಮನೆಗಳಲ್ಲಿ ಹಾಡಿ ಮನತುಂಬಿಕೊಳ್ಳುತ್ತಾರೆ. ಈ ಕಥನ ಕಾವ್ಯವು ಯಲ್ಲಮ್ಮ ಪರಶುರಾಮರ ಮೇಲೆ ಹೆಚ್ಚು ಒತ್ತು ನೀಡಿದ್ದು ಪರಶುರಾಮ ತನ್ನ ಜನ್ಮ ರಹಸ್ಯ ತಿಳಿಯಲು ಪಟ್ಟಪಾಡು, ಯಲ್ಲಮ್ಮ ಅದಕ್ಕೆ ಒಗಟಾದ ರೀತಿಯ ಉತ್ತರ ನೀಡಿದ ಬಗೆಯನ್ನು ಕಾಣಬಹುದಾಗಿದೆ. ಒಟ್ಟಾರೆ ಮಾತೃ ಪ್ರಧಾನ ವ್ಯವಸ್ಥೆಯ ಯಾವ ರೀತಿಯ ಮಹತ್ವ ಪಡೆದಿದೆ ಎಂದು ತಿಳಿಸುತ್ತವೆ. ಭಕ್ತರು ಸಹ ಈ ಕಥನ ಕಾವ್ಯಗಳನ್ನು ಬಹು ಶ್ರದ್ಧೆ, ಭಕ್ತಿಯಿಂದ ಹಾಡುತ್ತಾರೆ. ಮತ್ತು ಕೇಳಿ ಸಂತೋಷಪಡುತ್ತಾರೆ.

ರೇಣುಕಾ ಎಲ್ಲಮ್ಮನ ತಂದೆಯ ತೋರಿಸುವುದು ಅಸಾಧ್ಯವಾದ ಸ್ಥಿತಿಯಲ್ಲಿ ಎಲ್ಲಮ್ಮನಿಗೆ ಕ್ರೂರ ಹಿಂಸೆಯ ಕೊಡುವ ಪರಶುರಾಮ ಮುಳ್ಳಿನ ಹಾಸಿಗೆ ಹಾಸಿ ಮ್ಯಾಲೆ ರೇಣುಕಾ ಎಲ್ಲಮ್ಮನ ಮಲಗಿಸಿಬಿಟ್ಟ. ಉದ್ದನೆಯದೊಂದು ಹಗ್ಗ ಕಟ್ಟಿ ಎಳಕಂಡು ಹೋದ. ರಕ್ತವೆಂಬುದು ದಾರಿಯೆಲ್ಲ ಚೆಲ್ಲಿತು. ಗಿಡಗಿಡಕ್ಕೂ ಎಲ್ಲಮ್ಮನ ಕೂದ್ಲು ಕಿತ್ತು ಬರುವಂತೆ ಮಾಡಿದನು. ಕೊರಳಿಗೆ ಹಗ್ಗ ಕಟ್ಟಿ ಸಮುದ್ರಗುಂಟ ಎಳಕೊಂಡು ಬಂದ. ಅಲ್ಲಿ ಇಲ್ಲಿ ಬಿದ್ದಿರುವ ಸೌದೆ, ಕಟ್ಟಿಗೆ ಆರಿಸಿಕೊಂಡು ತಂದು ಹಾಕಿ ಅದರ ಮೇಲೆ ತಾಯಿನ ಮಲಗಿಸಿ ಕೊಳ್ಳಿಬೆಂಕಿ ಇಟ್ಟನು. ಇದು ಎಲ್ಲಮ್ಮಗೆ ಪರಶುರಾಮ ಹಿಂಸಿಸಿದ ಪರಿಯಾಗಿದೆ. ತಾಯಿ ಕಳಕೊಂಡ ಪರಶುರಾಮ ತನ್ನ ತಾಯಿಯ ಒಗಟುಗಳ ಮೂಲಕ ತಂದೆ ಯಾರು? ಮತ್ತು ಪರಶುರಾಮ ಜನಿಸಿದ ಬಗೆಯನ್ನು ಹೊಲದಲ್ಲಿ ಬೀಜ ಬಿತ್ತಿ ಫಸಲು ತೆಗೆದ ಬಗೆಯನ್ನು ಇಲ್ಲಿ ಹೋಲಿಕೆ ಮಾಡಿ ಒಗಟಿನಂತೆ ಉತ್ತರಿಸಿದ ಬಗೆಯ ತಾಯಿ ಕಳಕೊಂಡ ನಂತರ ಪರಶುರಾಮನಿಗೆ ಅರಿವಾಗುತ್ತದೆ. ಆ ಒಗಟು ಏನೆಂದರೆ 'ಕರಿಯ ಕಲ್ಲಿನ ಮೇಲೆ ಒಡೆದ (ಬೇಳೆಯಾದ) ಬೀಜಗಳ ಬಿತ್ತಿ ಸಣ್ಣನೆ ಗಾಳಿಯನ್ನು ತರಿಸಿ ಮಿಂಚನ್ನೇ ಉರಿಸಿ ಸಣ್ಣದ ಗುಡುಗನ್ನೇ ಗುಡುಗಿಸಿ ಎಲ್ಲಮ್ಮ ಅಂಗೈಯ್ಯಗಲ ಮೋಡದಲ್ಲಿ ಮಳೆಯನ್ನು ತರಿಸಿ ಬೆಳೆ ತೆಗೆಯುವ ಶರತ್ತು. ಅದರಂತೆ ಬಿತ್ತಿ ಬೆಳೆದು ತೋರಿಸಿದ್ದು, ಇದು ಮಾರ್ಮಿಕದ ನುಡಿಯಾಗಿದ್ದು ತನ್ನ ಜನನ ಅಂದರೆ ಮಾಋಷಿಯ ವಿವಾಹವಾಗಿ ಕೆಲವೇ ದಿನಗಳ ಕಾಲ ಸಂಸಾರ ನಡೆಸಿ ನಂತರ ಪರಶುರಾಮ ಜನ್ಮದ ನಂತರ ಬಿಟ್ಟುಹೋದ ಎನ್ನುವುದನ್ನು ಈ ಗುಡುಗು, ಮಿಂಚುಗಳು ಕ್ಷಣಮಾತ್ರ ಬಂದು ಮಾಯವಾಗುವುದಕ್ಕೆ ಹೋಲಿಸಿದ್ದು ಈ ಕಾವ್ಯದ ವಿಶೇಷವಾಗಿದೆ. ಒಟ್ಟಾರೆ ಈ ಕಥನ ಕಾವ್ಯವು ಚಿಕ್ಕದಾಗಿದ್ದು ಒಂದು ಸುಂದರ ಚೌಕಟ್ಟಿನಲ್ಲಿ ಮೂಡಿಬಂದಿದೆ.

## ೩.೩ ಎಲ್ಲಮ್ಮನ ಕಥನ ಕಾವ್ಯದ ವಿಶ್ಲೇಷಣೆ – ಪ್ರೊ. ಕೆ. ಎಂ. ಮೇತ್ರಿ

ಎಲ್ಲಮ್ಮನ ಕಥನ ಕಾವ್ಯವನ್ನು ಶ್ರೀಮತಿ ಬುರ್ರಕಥಾ ಈರಮ್ಮ ಹಾಡಿದ್ದು ಇದನ್ನು ಕನ್ನಡ ವಿಶ್ವವಿದ್ಯಾಲಯ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ. ಕೆ.ಎಂ. ಮೇತ್ರಿಯವರು ಸಂಪಾದಿಸಿದ್ದಾರೆ.

ಶ್ರೀಮತಿ ಬುರ್ರಕಥಾ ಈರಮ್ಮ ಅವರ ಸಂಕ್ಷಿಪ್ತ ಪರಿಚಯ ಗಮನಿಸುವುದಾದರೆ, ಬುರ್ರಕಥಾ ಈರಮ್ಮ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹಳೆ ದರೋಜಿಯಲ್ಲಿ ಜನಿಸಿದರು. ಇವರು ಸುಮಾರು ೭೦ ವರ್ಷ ವಯಸ್ಸಾಗಿದೆ. ಇವರ ಬುಡಗ, ತೆಲುಗು ಮಾತೃಭಾಷೆಗಳು. ಕನ್ನಡ, ತೆಲುಗು, ಬುಡಗ, ಹಿಂದಿ ಮಾತನಾಡುತ್ತಾರೆ. ಇವರದು ಬುಡ್ಗ ಜಂಗಮ್ (ಪರಿಶಿಷ್ಟ ಜಾತಿ) ಜಾತಿಯಲ್ಲಿ ಜನಿಸಿದ್ದು ಹೊರಗೆ ಗುಡಾರಗಳಲ್ಲಿ ವಾಸಮಾಡಿದ್ದು ೨೦೦೪ರಲ್ಲಿ ಹಳೇ ದರೋಜಿಯಲ್ಲಿ ಆಶ್ರಯ ಮನೆ ಪಡೆದರು. ತಂದೆ–ತಾಯಿಯಿಂದ ಬುರ್ರಕಥೆಗಳನ್ನು ಹಾಡಿ ಪ್ರದರ್ಶಿಸುವುದನ್ನು ಕಲಿತರು. ಇವರಿಗೆ ಯಾವುದೇ ಚರಾಸ್ತಿ ಸ್ಥಿರಾಸ್ತಿಗಳಿಲ್ಲ. ಇವರು ನುಡಿಸುವ ಬುರ್ರವಾದ್ಯಗಳೇ ಇವರಿಗೆ ಆಸ್ತಿಗಳಾಗಿವೆ. ಇವರು ಹಾಡುವ ಕಥೆಗಳು, ಕಾವ್ಯಗಳು ಹಾಗೂ ಕೇಳುವವರೇ ಇವರಿಗೆ ಆಸ್ತಿಗಳಾಗಿವೆ. ಇವರು ಬುರ್ರಕಥಾ ಹಾಡುತ್ತಾ ದಾನ ಧರ್ಮ ಸ್ವೀಕರಿಸಿ ಜೀವನ ಸಾಗಿಸುತ್ತಾರೆ. ಇವರು ೧೨ಕ್ಕೂ ಅಧಿಕ ಬುಡಕಟ್ಟು ಮಹಾಕಾವ್ಯ ಹಾಡುತ್ತಾರೆ. ಇವರ ಸಹೋದರಿ, ಅತ್ತಿಗೆ ಗ್ರಾಮಸ್ತರು ಸಹಕರಿಸುತ್ತಾರೆ. ಇವರ ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಲಾಗಿದೆ. ಇವರ ಜೀವನ ಚರಿತ್ರೆಯು ದರೋಜಿ ಈರಮ್ಮ ಗರಿಗೆದರಿದವರು ಎಂಬ ಹೆಸರಿನಿಂದ ಡಾ. ನಿಂಗಪ್ಪ ಮುದೇನೂರು ಅವರು ಸಂಪಾದಿಸಿ ಪ್ರಕಟಿಸಿದ್ದಾರೆ.

ಬುರ್ರಕಥಾ ಈರಮ್ಮ ಹಾಡಿದ ಕಾವ್ಯಗಳು ಪ್ರಕಟಣೆಗೆ ಸಿದ್ಧವಾದ ಕಾವ್ಯಗಳೆಂದರೆ ಬಬ್ಬುಲಿ, ನಾಗಿರೆಡ್ಡಿ, ಆದೋನಿ ಲಕ್ಷ್ಮಮ್ಮನ ಕಾವ್ಯ, ಬಾಲನಾಗಮ್ಮನ ಕಾವ್ಯ, ಬಲಿ ಚಕ್ರವರ್ತಿ ಕಾವ್ಯ, ಮಾರವಾಡಿ ಸೇಠಿಕಾವ್ಯ, ಜೈಸಿಂಗ್ ರಾಜ್ ಮತ್ತು ಮಹಮದ್‌ಖಾನ್‌ರ ಕಾವ್ಯಗಳು ಪ್ರಕಟಣಾ ಹಂತದಲ್ಲಿವೆ. ಬುರ್ರಕಥಾ ಈರಮ್ಮ : ಒಂದು ಅಧ್ಯಯನ ಪಿಹೆಚ್.ಡಿ ಮಹಾಪ್ರಬಂಧವಾಗಿದೆ. ಹೊಸಪೇಟೆ ಆಕಾಶವಾಣಿಯಲ್ಲೂ ಅನೇಕ ಕಾವ್ಯ ಹಾಡಿದ್ದು ಪ್ರಸಾರವಾಗಿದೆ. ದೂರದರ್ಶನ ಈ–ಟಿ.ವಿಯಲ್ಲೂ ಇವರ ಜೀವನ ಬದುಕು ಮತ್ತು ಸಾಧನೆ ಪ್ರಸಾರವಾಗಿದೆ. ತಮ್ಮ ವೃತ್ತಿ ಜೀವನದಲ್ಲಿ ಕಾವ್ಯ ಕಲಾ ಪ್ರದರ್ಶನದ ಪ್ರಸಾರ ಮಾಡುತ್ತಾ ಅಲೆಯುತ್ತಾ ಜೀವನ ಸಾಗಿಸುತ್ತಾ ಬಂದಿದ್ದಾರೆ. ಇವರ ಕಾವ್ಯ ಕಥನ ಕಾವ್ಯ ಹಾಡುವಿಕೆಗೆ ಅನೇಕ ಪ್ರಶಸ್ತಿ ಪುರಸ್ಕಾರ ಲಭಿಸಿವೆ. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಂಸ್ಕೃತಿ ಇಲಾಖೆ ಮೊದಲಾದ ಸಂಸ್ಥೆಗಳು ಈ ಕೆಳಗಿನ ಅನೇಕ ಪ್ರಶಸ್ತಿ ನೀಡಿ ಗೌರವಿಸಿವೆ.

೧. ರಾಜ್ಯೋತ್ಸವ ಪ್ರಶಸ್ತಿ – ೧೯೯೯
೨. ಸಂದೇಶ ಕಲಾ ಪ್ರಶಸ್ತಿ – ೨೦೦೩
೩. ಡಾ. ಬಿ.ಆರ್. ಅಂಬೇಡ್ಕರ್ ಪ್ರಶಸ್ತಿ – ೨೦೦೩
೪. ಬುರ್ರಕಥಾ ಕಲಾಶ್ರೀ ಪ್ರಶಸ್ತಿ – ೨೦೦೪
೫. ನಾಗರಿಕ ಸನ್ಮಾನ – ೧೯೯೯

೬. ಭಾರತ ಸರ್ಕಾರದ ಪ್ರಸಾರ ಭಾರತಿಯು ಅದ್ಭುತ ಜನಪದ ಕಲಾವಿದರಿಗೆ ೨೦೦೪-೦೫ನೇ ಸಾಲಿನ ಧನ ಸಹಾಯ ನೀಡಿದೆ.

೭. ಸಂಪನ್ಮೂಲ ವ್ಯಕ್ತಿಯಾಗಿ ಗುರುತಿಸಿಕೊಂಡಿದ್ದಾರೆ.

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನವಿದೆ. ಸ್ತ್ರೀಯರನ್ನು ಶಕ್ತಿ ಸಂಕೇತವಾಗಿ ಕಂಡು ನಮ್ಮವರು ದುಷ್ಟದಮನ ಶಿಷ್ಟ ರಕ್ಷಣೆಗಾಗಿಯೇ ಸ್ತ್ರೀ ಅವತಾರ ತಾಳಿರುವಳು ಎಂದು ನಂಬಿದ್ದರು. ಈ ಅವತಾರದ ಫಲವಾಗಿಯೆ ದ್ಯಾಮವ್ವ, ದುರುಗಮ್ಮ, ಮಾರೆಮ್ಮ, ಎಲ್ಲಮ್ಮ, ಕಾಳಮ್ಮ, ಚೌಡಮ್ಮ, ಪಾಲಕಮ್ಮ ಈ ಏಳು ಮಂದಿ ಅಕ್ಕ-ತಂಗಿಯರು ಸಮಾಜದ ಪಾಲನೆ ಪೋಷಣೆ ರಕ್ಷಣೆಗಾಗಿಯೇ ಹುಟ್ಟಿಕೊಂಡರು ಎನ್ನುವ ಪರಿಕಲ್ಪನೆಯಿದೆ. ಇವರೆಲ್ಲ ಶಕ್ತಿ ದೇವತೆಗಳು, ಅಷ್ಟೇ ಕ್ರೂರ ದೇವತೆಗಳು. ಜಗತ್ತಿನ ಪಾಲನೆ, ಪೋಷಣೆ ಇವರ ಗುರಿ. ಮನುಷ್ಯನಿಗೆ ರೋಗ ರುಜಿನಗಳು ಬರದಂತೆ ಕಾಪಾಡುವರು. ನೈಸರ್ಗಿಕ ವಿಕೋಪ, ವಿಪತ್ತುಗಳು ರೋಗ ರುಜಿನಗಳು, ಬಡತನ, ಅಶಾಂತಿಗೆ ಇವರೇ ಕಾರಣ ಮತ್ತು ನಿವಾರಣೆ ಇವರಿಂದ ಸಾಧ್ಯ ಎಂಬ ಬಲವಾದ ನಂಬಿಕೆ ಇದೆ. ಈ ನಂಬಿಕೆಯಿಮದ ಬಲಿಪದ್ಧತಿ, ಬೆತ್ತಲೆ ಸೇವೆ, ದೇವದಾಸಿ ಪದ್ಧತಿ ಮುಂತಾದ ಅನಿಷ್ಠ ಸಂಪ್ರದಾಯಗಳ ಆಚರಣೆ ನಡೆಯುತ್ತವೆ. ಸ್ತ್ರೀ ದೇವತೆಗಳ ಹೆಸರಿನಲ್ಲಿ ಸಮಾಜದಲ್ಲಿ ತಳವರ್ಗದವರ ಮುಗ್ಧರ ಅಮಾಯಕರ ಶೋಷಣೆ ಕಾಲಾನು ಕಾಲದಿಂದ ಯಥಾವತ್ತಾಗಿ ನಡೆದುಕೊಂಡೆ ಬಂದಿದೆ. ಈ ಹಿನ್ನಲೆಯಲ್ಲಿ ದೇವಿ ಆರಾಧನೆ ಆಕೆಯ ಜೀವನ ಚಿತ್ರಣ ಪವಾಡಗಳು ಮುಂತಾದ ಅನೇಕ ರೀತಿಯ ಘಟನೆಗಳ ಕುರಿತಾಗಿ ಅನೇಕ ಹಾಡುಗಳು, ಕಾವ್ಯಗಳು, ಕಥೆಗಳು ಹುಟ್ಟಿಕೊಂಡವು. ಮೌಖಿಕ ಸಂಪ್ರದಾಯದ ಮುಖಾಂತರ ಅವು ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದಿವೆ. ಅಂತಹ ಕಥನ ಕವನಕ್ಕೆ ಉದಾರಹಣೆ ಎಂಬಂತೆ ಬುರ್ರಕಥಾ ಈರಮ್ಮ ತಮ್ಮ ಪೂರ್ವಜರಿಂದ ಬಳುವಳಿ ಎಂಬಂತೆ ಎಲ್ಲಮ್ಮ ಕಥನ ಕಾವ್ಯದಲ್ಲಿ ಎಲ್ಲಮ್ಮನ ಜನನ, ಬೆಳವಣಿಗೆ, ಎಲ್ಲಮ್ಮನ ವಿವಾಹ, ಪತಿಭಕ್ತಿ, ಸತ್ವ ಭಕ್ತಿ, ಪರಶುರಾಮನ ಜನನ, ಜೀವ, ಪರಶುರಾಮ ಎಲ್ಲಮ್ಮನ ನಡುವಿನ ವಿವಾದಗಲು ತಂದೆ ಬೇಕೆಂದು ಹಠಮಾರಿತನದಿಂದ ಎಲ್ಲಮ್ಮ ಕಾಡಿದ ರೀತಿ, ಪರಶುರಾಮ-ಮಾರೆಕ್ಕರ ವಿವಾಹ, ಚೌಡಿಕೆ ರಾಮನ ಜನನ, ಕ್ವಾಣ ಬಲಿವಿಧಾನ, ಪರಶುರಾಮನಿಂದ ಕಾರ್ತಿಕರಾಜನವರ ಸಂಹಾರ, ಪರಶುರಾಮನಿಗೆ ತಂದೆಯ ಸಾಕ್ಷಾತ್ಕಾರ, ಪಾರ್ವತಿ ಪರಮೇಶ್ವರರಿಂದ ಜೀವನ್ಮುಕ್ತಿ ಹೊಂದಿದ ರೀತಿ ಎಲ್ಲಮ್ಮ ದೈವವಾಗಿ ಸವದತ್ತಿ ಎಲ್ಲಮ್ಮಳಾಗಿ ನೆಲೆಸಿದ್ದು ಕೊನೆಗೆ ಮಂಗಳಾರತಿ ಹಾಡುವುದರ ಮೂಲಕ ಈ ಕಾವ್ಯ ಮುಕ್ತಾಯವಾಗುತ್ತದೆ. ಈ ಕಾವ್ಯದ ವಿಶ್ಲೇಷಣೆ ಈ ರೀತಿಯಾಗಿದೆ.

ಮಾಣುಷಿ ಮತ್ತು ಎಲ್ಲಮ್ಮನ ಜನನ ಕುರಿತು ಕಾವ್ಯ ಕಟ್ಟುವಾಗ ಹೊಳೆದಂಡೆಯ ಅಂಟಿ ಮಾವಳಿ ಪಟ್ಟಣ ಜಗದ ದೇವರು ನನ್ನ ಗಂಡ ಎಂದು ನಂಬಿ ಬೊಗಸೇಲಿ ನೀರ ತಂದು ಪಾದಕ್ಕೆ ಹಾಕಿ ಶರಣು ಮಾಡುತ್ತಾ ಇರುವಾಗ ಪಾರ್ವತಿ-ಪರಮೇಶ್ವರರ ಹೂವಿನ ತೋಟದಾಗ ಸಂಚರಿಸುತ್ತಾ ಭೂಲೋಕ ನೋಡುತ್ತಾರೆ. ಅಲ್ಲಿ ಸತ್ಯವಂತ ಹೆಣ್ಣುಮಗಳು ಪತಿಭಕ್ತಿಗೆ ಮೆಚ್ಚುವ ಮಾತುಗಳು ಹೀಗಿವೆ.

"ಇಂಥಾ ಸತ್ಯವಂತ ಹೆಣ್ಣುಮಗಳು ಎಲ್ಲೆ ಕಾಣೆ
ಗಂಡನ ಪಾದ ತೊಳ್ದು

ನೀರು ಕುಡ್ದು
ಮುತ್ತಿನ ಸೆರಗಾಸಿ
ಯಾರು ಕೈಮುಗಿತಿದ್ದಾರ ಗಂಡನಿಗೆ?" [೩೭]

ಚೌಡಿಕಾನ ಮಾದೇವಿಯ ಪತಿ ಭಕ್ತಿಗೆ ಪ್ರಶಂಸಿಸುತ್ತಾರೆ. ದುಷ್ಟಲೋಕದಾಗ ಎಂಥ ಪತಿ ಭಕ್ತಿ ಇದು. ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಪತಿ-ಪತ್ನಿಯ ಸಂಬಂಧಗಳು ಅಷ್ಟು ಸಂಬಂಧ ಪೂರ್ಣವಿಲ್ಲದ ಕಾಲದಲ್ಲಿ ಗಂಡನ ಸೇವೆ ಮಾಡಿದ್ದಕ್ಕೆ ಸಂತೋಷದಿಂದ ಹೂವ ಕೊಡುತ್ತಾರೆ. ಆ ಹೂವ ಮಲ್ಲಿಗೆ ಮೊಗ್ಗು ಊಟ ಮಾಡಿದಳು. ಪತಿ ಪಾದ ತೊಳೆದು ನಿರು ಕುಡಿದಿದ್ದಕ್ಕೆ ಸಂತೋಷದಿಂದ ಮಾಋುಷಿನ ಕೊಟ್ಟ ಪರಮಾತ್ಮ. ಇದು ಇಂದಿಗೂ ಪತಿಯ ಮೇಲಿನ ಭಕ್ತಿಯಿಂದ ಪಾದ ಪೂಜೆ ಮಾಡುವ ಸ್ತ್ರೀಯರನ್ನು ಕಾಣಬಹುದಾಗಿದೆ. ಆಗ ಪಾರ್ವತಿ ಸಹ ಒಂದು ಹೆಣ್ಣು ಮಗುವ ಕೊಡುವುದಾಗಿ ನಿರ್ಧರಿಸಿ ಪಾರ್ವತಿ ತನ್ನ ಗಂಡನ ಬೆನ್ನ ತಿಕ್ಕಿ ಅದರಿಂದ ಎರಡು ಬೊಗಸೆ ಮಣ್ಣ ತೆಗೆದು ಅದರಿಂದ ಗೊಂಬೆ ಮಾಡಿ ಜೀವ ತುಂಬಿದಳು. ಅದೇ ಮಗಳು ಜಗದಲ್ಲಿ ಹೆಚ್ಚಾಗುವಳು ಎಂದು ಹಾರೈಸುತ್ತಾಳೆ. ಇದು ಸಹ ದೇವಲೋಕದ ಶಿವನು ಲೋಕ ಸಂಚಾರದಲ್ಲಿರುವಾಗ ಪಾರ್ವತಿಯ ಸ್ನಾನ ಮಾಡುವ ಸಮದರ್ಭದಲ್ಲಿ ತನ್ನ ರಕ್ಷಣೆಗೆ ಮೈಮೇಲಿನ ಮಣ್ಣಿನಿಂದ ಗಣೇಶನ ಸೃಷ್ಟಿ ಮಾಡಿದ ಶಕ್ತಿವಂತಿಕೆಯೂ ಪರ್ಯಾಯವಾಗಿ ಎಲ್ಲಮ್ಮನ ಸೃಷ್ಟಿಗೆ ಕಾರಣವಾಗಿರುವುದನ್ನು ಜನಪದರ ನಂಬಿಕಯಾಗಿದೆ. ಆಗ ಯಲ್ಲಮ್ಮನ ಕುರಿತಾಗಿ ಹೀಗೆ ಹೇಳುತ್ತಾರೆ.

"ಬಣ್ಣದ ಎಲ್ಲಮ್ಮ ನೀನೆ ಲೋಕ ನೋಡಮ್ಮ ದೇವಿ
ಏ.. ಕೆಂಪಗಿದ್ದವು ನೀನೇ ಕರ್ರಗ ಮಾಡಮ್ಮ ಲೋಕ
ಏ.. ಮಣ್ಣಿಲಿದ್ದಮ್ಮ ನೀನು ತಯಾರಾಗಿದಿಯಾ ನೀನು
ಕರೆಮಣ್ಣಿಲಿದ್ದ
ನೀನೇ ಕರೆ ಹುಲಿಗೆಮ್ಮ ನೀನು ಲೋಕದಾಗವ್ವ" [೩೮]

ದೇಶಕ್ಕೆ ಹುಲಿಗೆವ್ವ ಆಗಬೇಕು, ಬೇವಿನ ಗರಿಯಿಂದ ಬಳೆ ಮಾಡಿ ಅರಿಶಿಣ ಭಂಡಾರ ಹಚ್ಚಿ, ಬಿದಿರಿನಿಂದ ಪುಟ್ಟಿ ಮಾಡಿ ಜಗಪುಟ್ಟೆಮ್ಮ ಎಂದು ಹೆಸರಿಟ್ಟು ಅಜಗಪುಟ್ಯಾಗ ನಿಂಬೆಕಾಯಿ ಅರಿಶಿಣ, ಬಂಡಾರ ಇಟ್ಟು ಅದರಾಗ ಮಗು ಮಲಗಿಸಿ ಹುಲಿಗೆಮ್ಮ ಅಂಥ ಹೆಸರಿಟ್ಟು ಪಾರ್ವತಿ-ಪರಮೇಶ್ವರರ ಜಾರೆಗಿಡದ ಕೆಳಗೆ ಹುತ್ತವ ಪಕ್ಕ ಇಟ್ಟು ರಥವೇರಿ ಹೋಗುತ್ತಾರೆ. ಆ ಮಗು ಬೆಳೆದು ಯಲ್ಲಮ್ಮಳಾಗಿ ಜಗದ ದೇವತೆಯಾಗುತ್ತಾಳೆ. ಜಮ್ಮಿಗಿರಿ ಪಟ್ಟಣದಲ್ಲಿ ಎಲ್ಲಮ್ಮನ ಬೆಳವಣಿಗೆಯು ಶಿವ ಪಾರ್ವತಿ ಬೆಳೆಸುತ್ತಾರೆ. ಕಾರ್ತಿಕ ರಾಜನಿಗೆ ಏಳು ಮಂದಿ ಮಕ್ಕಳು. ಆಗ ಕುಂತಿ ಮಾದೇವಿ ಈಗ ಶೂರ್ಪಣಕಿ ಬೇಟೆಯಾಡಲು ಕಾಡಿಗೆ ಕೋಣದ ಮೇಲೆ ಹೋಗುತ್ತಾರೆ. ಗುಡ್ಡದಾಗ ಮಕ್ಕಳು ನೀರಡಿಕೆ ಆಗುತ್ತದೆ. ನೀರಿಗಾಗಿ ಹೊಳೆದಂಡಿಗೆ ಹೋಗುತ್ತಾರೆ. ಅಲ್ಲಿ ಮಗುವ ಈ ರೀತಿ ಕಾಣುತ್ತಾರೆ.

"ಈ ಕ್ವಾಣ ಏಳಕೊಂಡು ಬರುವಾಗ
ಈಗ ಏಳ ಹೆಡೆ ಸರಪಣ

ಆಗ ಜಗಪುಟ್ಟಿ ಸುತ್ತ
ಸುತ್ತುವರಿಕೊಂಡು
ಆ ಮಗಳಿಗಿ ಹೆಡೆ ಎತ್ತಿ
ಆಗ ಬೀಸಿ ಹೊಡಿತೈತೆಪ್ಪಾಗಾಳಿ" ೩೯

ಈ ಕಥನ ಕಾವ್ಯವು ಅನುಕೂಲಕ್ಕೆ ತಕ್ಕಂತೆ ಕಾವ್ಯಗಳ ಹಾಡುತ್ತಾರೆ. ಉಸಿರು ನಿಲ್ಲುವ ತನಕ ಕಥೆ ಹೇಳಿ ಮತ್ತೆ ಕಥೆ ಮುಂದುವರೆಸುತ್ತಾರೆ. ತಮಗೆ ತಿಳಿದಿರುವ, ಗೊತ್ತಿರುವ ಕಥೆಯನ್ನು ಮುಂದುವರೆಸುತ್ತಾರೆ. ಈ ಕಥನ ಕಾವ್ಯವು ಪೌರಾಣಿಕ ಅಂಶದಿಂದ ಜನಪದೀಯ ಶೈಲಿಯಲ್ಲಿ ಸಾಮಾನ್ಯ ಭಾಷೆಯಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವಂತೆ ಯಾವುದೇ ರೀತಿಯ ಬೇಜಾರು ಆಗದ ರೀತಿಯಲ್ಲಿ ಹಾಡುತ್ತಾರೆ. ಈ ಕಥೆ ಮುಂದುವರೆದು ಕಾರ್ತಿಕ ಒತ್ತಾಯದ ನಿಮಿತ್ತ

"ಆ ಮಗಳ ಕೈಯಾಗೆತ್ತಿಕೊಂಡು
ಆ ಯಮ್ಮನ ಜಗ ಪುಟ್ಟಿ ಅಲ್ಲೆ ಬಿಟ್ರು
ಬಾರೆಹಣ್ಣು ಗಿಡ ಕೆಳಗ
ಈಗ ದೇವ್ರು ಗುಡ್ಡಗೆ" ೪೦

ಆ ಹೆಣ್ಣು ಮಗುವ ಎತ್ತಿಕೊಂಡು ಢೊಳ್ಳು ಹೊಡೆಯುತ್ತಾ ಕೇಕೆ ಹೊಡೆಯುತ್ತಾ ಏಳು ಗುಡ್ಡ ಏರಿ ಬರುತ್ತಾರೆ. ಅಲ್ಲಿಗೆ ಜಮ್ಮಿಗಿರಿ ಪಟ್ಟಣದಲ್ಲಿ ಶಾಸ್ತ್ರದ ಪ್ರಕಾರ ಹೆಣ್ಣು ದೇವ್ತಿ ಅಂತ ತಿಳಿದು, ಈಕಿ ಧಾನ ಧರ್ಮವ ಬೇಡುವಾಕಿ, ಮಣ್ಣಲ್ಲಿ ತಯಾರಾಗ್ಯಾಳ ಅಂತೇಳಿ ಬಣ್ಣದ ಎಲ್ಲಮ್ಮ ಅಂತೇಳಿ ಕಾರ್ತಿಕ ರಾಜರು ಹೆಸರಿಡುತ್ತಾರೆ. ದೇವಿ ಸಾಮಾನ್ಯಳಲ್ಲ ಈಕಿ ಆಸ್ತಿ ಕೊಡಬೇಕು. ಬೆಳಗಿನ ಜಾವ ಕೋಳಿ ಕೂಗೋ ಸಟ್ಟ ಸರೋತ್ತ್ಯಾಗ ಎದ್ದು, ತಣ್ಣೀರು ಸ್ನಾನ ಮಾಡಿಸಿ, ಅರಿಶಿಣ ಭಂಡಾರ ಹಚ್ಚಿ, ಬಿಳಿ ಅಂಗಿ ತೊಡಿಸಿ, ಬಿಳಿ ಗಗ್ರಿ ಉಡ್ಸೋದು, ಉಣ್ಸೋದು ಹೀಗೆ ದಿನಾಲು ಕಾಳಜಿ ಮಾಡಿ ಹೆಣ್ಣಿನ ಮೇಲೆ ಪ್ರೀತಿಯಿಂದ ಬೆಳೆಸುತ್ತಾರೆ. ದಿನಕ್ಕೆ ಮೂರು ನಾಲ್ಕು ಸರತಿ ಸ್ನಾನ, ಭಂಡಾರ, ಹಾಲು ಹುಡಿಸಿ ಜೋಪಾನ ಮಾಡುತ್ತಾರೆ. ವರ್ಷದಿಂದ ವರ್ಷಕ್ಕೆ ದೇವಿಗೆ ಪೂಜೆ ರೀತಿಯ ಪಾಲನೆ ಮಾಡುತ್ತಾ ಬಂಗಾರ ಪೋಟೋಕ್ಕೆ ಸೀರೆ ಉಡ್ಸಿ, ಹೂವ ಮುಡ್ಸಿ, ಕುರ್ಚಿ ಮೇಲೆ ಕುಂದ್ರಿಸಿ, ಬೆಳ್ಳಿ ಕೊಡಪಾನ ಮಾಡಿ ಹೊಳೆದಂಡೀಲಿ ಬಂದು ಹೂ ಕಾರಿ ಅರದು ನೀರ ತುಂಬಿ ಉಧೋ ಉಧೋ ಎನ್ನುವ ಆದಿಶಕ್ತಿ ದೇವಿಗೆ, ಜೋಳದ ನಿಧಿ ಹಾಕಿ ಹಾಲು, ತುಪ್ಪ ಪೂಜೆ ಮಾಡುತ್ತಾರೆ. ಹೀಗೆ ಸಾಮಾನ್ಯ ಹೆಣ್ಣು ಮಗುವಿಗೆ ಅದರ ಮೇಲಿನ ಅತಿಯಾದ ಪ್ರೀತಿ ಅಕ್ಕರೆಯು ದಿನದಿಂದ ದಿನಕ್ಕೆ ಹೆಚ್ಚಾಗಿ ದೇವತೆಯ ಸ್ವರೂಪ ತಾಳಿರುವಿಕೆ ಕಂಡು ಬರುತ್ತದೆ. ಇದು ಕಾಲಕ್ರಮೇಣ ಸಾಮಾನ್ಯ ಮಹಿಳೆ ದೇವತೆಯಾಗಿ ನಿರ್ಮಾಣವಾಗಿರುವುದನ್ನು ನಾವು ನೋಡಬಹುದಾಗಿದೆ. ಇದು ಕಾಲಕ್ರಮದಲ್ಲಿ ಈ ಆಚರಣೆಗಳು ಅತಿರೇಖವಾಗಿ ಹರಕೆಗಳು ಸೇವೆಯ ಭಾವನೆಗಳು ಮುಂದೆ ಬೆತ್ತಲೆ ಸೇವೆ, ಬೇವಿನುಡಿಗೆ, ದೀಡು ನಮಸ್ಕಾರ, ಉಪವಾಸ, ಬಲಿ ಪದ್ಧತಿಗಳು ಮೊದಲಾದ ಅನೇಕ ಅಮಾನುಷ ಪದ್ಧತಿಗಳಾಗಿ ಮಾರ್ಪಟ್ಟಿರುವುದನ್ನು ನಾವು ಗಮನಿಸಬಹುದಾಗಿದೆ.

ಎಲ್ಲಮ್ಮನ ಮದುವೆಯನ್ನು ದೇವಿ ಬೆಳೆದು ದೊಡ್ಡವಳಾದಂತೆ ಏಳು ಮಂದಿ ಅಣ್ಣ ತಮ್ಮಂದಿರು ತಾಯಿ ಕುಂತಿ ಮಾದೇವಿ, ಅತ್ತೆಗೆ ಶೂರ್ಪಣಿಕಿ ತಂದೆ ರಾಮನ ಬ್ರಹ್ಮ ಯೋಚಿಸುತ್ತಾರೆ. ಹಳ್ಳಿ ಊರುಗಳಿಗೆ ಪತ್ರ ಬರೆದರು ಜನ ಒಪ್ಪದೆ ನಿಮ್ಮ ಆಸ್ತಿ ಬೇಡ, ಯಲ್ಲಮ್ಮ ಬೇಡ ನೀವು ರಾಕ್ಷಸಿ ವಂಶಸ್ತರು, ಕರೆಕಾಗಿಯ ಮತವರು, ನಿಮ್ಮ ಮೈಮೇಲೆ ಅರವತ್ತು ಆಯುಧಗಳಿವೆ ಎನ್ನುವಂತಹ ಸಂದರ್ಭದಲ್ಲಿ ಮಾಋುಷಿಗೆ ಪತ್ರ ಬಂದು ತಲುಪಿ ಅವನು ಯಲ್ಲಮ್ಮನ ಮದುವೆಯಾಗಲು ಸಿದ್ಧನಾದಾಗ ಅವನ ತಾಯಿ ಬೇಡ ಎನ್ನುವಳು. ಮಾಋುಷಿ ತಲೆ ಬೋಳ್ಸಿ ಮೂರೇ ಕೂದ್ಲು ಉಳಿಸಿಕೊಂಡು ಮೂರು ನಾಮ ಹಾಕ್ಕೊಂಡು ಜನಿವಾರ ಅರಿಶಿಣ ಕೊಳ್ಳಾಗ ಹಾಕಿಕೊಂಡು, ಬಾಲಗ್ರಹ ಪುಸ್ತಕ ಹಿಡ್ಕೊಂಡು, ಕೈಚೀಲ ಹಾಕ್ಯಂಡ, ಶಾಸ್ತ್ರ ಹೇಳಲಿಕ್ಕೆ ಬಂದಾಗ ಏಳು ಜನ ಅಣ್ಣ ತಮ್ಮಂದಿರು ವಿಚಾರಿಸಿದರು. ಆಗ ರೇಣುಕಾ ದೇವಿನ ಯಾರಿಗೆ ಕೊಡೋರು ಶಾಸ್ತ್ರ ಹೇಳು ಅಂತ ಕೇಳುತ್ತಾರೆ ಆಗ.

"ನೋಡಪ್ಪ ಈಕಿ ಸಿಕ್ಕಿದಾಕಿ
ದಾನ ಬೇಡೋವ್ನಿಗೆ ಕೊಡ್ಬೇಕು
ಈಕಿಗೆ ಲೋಕನೆ ತಿರುಗೋವ್ನಿಗೆ ಕೊಡ್ಬೇಕು" [೪೧]

ಎಂದು ಹೇಳಲು ನೀನೆ ಅಂತವರನ್ನು ತೋರಿಸು ಅಂತ ಅಣ್ಣಂದಿರು ಏಳುಗುಡ್ಡ ನಿನ್ನೆಸರಲ್ಲಿ ಮಾಡ್ತೀವಿ ಎಂದು ಹೇಳುತ್ತಾರೆ. ಜಮ್ಮಿಗಿರಿ ಪಟ್ಟಣ ನಿಮಗೆ ಮಾಡಿಸ್ತೀನಿ, ಮನೆ ಮುಂದೆ ಲಗ್ನ ಮಾಡ್ತೀವಿ ನಿನು ಸಾಯೋತನ್ನ ಮನಿತನ ಇರಬೇಕು ಹೋಂ ಅನ್ಬೇಕು ಎಂದು ಬೇಡುತ್ತಾರೆ.

ಯಲ್ಲಮ್ಮನ ವಿವಾಹಕ್ಕೆ ಕಾರ್ತಿಕರಾಜ ಒಪ್ಪಿದ ನಂತರ ಜುಟ್ಟು ತೆಗೆಯಬೇಕು, ಮಡಿವಸ್ತ್ರ ಬಿಚ್ಚಬೇಕು ಎಂದು ಅಣ್ಣರ ಹೇಳಿಕೆ ಒಪ್ಪದೆ ಹಾಗೆ ವಿವಾಹವಾಗಲು ನಿರ್ಧರಿಸಿದರು. ವಿವಾಹಕ್ಕೆ ಸಕಲ ಸಿದ್ಧತೆ ನಡೆಯುತ್ತದೆ. ಒಂದೇ ಕೈ ಮತ್ತು ಕಾಲಿನಿಂದ ಕುಂಬಾರ ದೇವಿ ಭಕ್ತಿಯಿಂದ ಗಡಿಗೆ ತಯಾರು ಮಾಡಿದ. ಗಡಿಗೆ, ಪಡಗ, ಮೂಗುತಿ, ಕರ್ಪೂರ ಎಲ್ಲ ಜೋಡಿಸಿ ವ್ಯವಸ್ಥಿತವಾಗಿ ಮದುವೆಗೆ, ಧರ್ಮದ ಮದುವೆ ಎಲ್ಲ ಅವಸರ ಮಾಡಿದರು. ಈ ಕಾವ್ಯವು ಆಧುನಿಕ ಭಾಷೆಗೆ ಸಿಲುಕಿದೆ. ಬದಲಾದ ಕಾಲಘಟ್ಟದಲ್ಲಿ ಮೌಖಿಕ ಪರಂಪರೆ ಭಾಷೆ, ಶೈಲಿ, ನಿರೂಪಣಾ ವಿಧಾನ ಕಥನಕಾವ್ಯದ ಸ್ವರೂಪವು ಬದಲಾಗಿದೆ.

ರೇಣುಕಾ ಯಲ್ಲಮ್ಮನ ಮದುವೆಗೆ ತಾಳಿ, ಕುಬುಸ, ಸೀರೆ ಎಲ್ಲಾ ತಯಾರು ಮಾಡುತ್ತಾರೆ. ಯಲ್ಲಮ್ಮನ ವಿವಾಹಕ್ಕೆ ಬೇಕಾದ ಎಲ್ಲ ಸಾಮಾನುಗಳು, ವಸ್ತ್ರಗಳು ದೇವಿ ಭಕ್ತಿಗೆ ಮೆಚ್ಚಿ ಕೊಡುತ್ತಾರೆ. ಆ ವಸ್ತುಗಳ ಯಾರೂ ಉಡಗಿಲ್ಲ ಸೀರೆ ಬಂಗಾರ ಕಡ್ಡಿಯಿಂದ ಬಹಳ ಕಾಳಜಿಯಿಂದ ತಯಾರು ಮಾಡುತ್ತಾರೆ. ರೊಕ್ಕಕ್ಕೆ ಕಾಯಿ ಕರ್ಪೂರ ಕೇಳುತ್ತಾರೆ. ಅವ ಧರ್ಮದ ಲಗ್ನಕ್ಕೆ ರೊಕ್ಕ ಬೇಡ ನಾವು ವ್ಯಾಪಾರ ಮಾಡುವವರು ಇಗ ಬೇಕಾದ್ಹಂಗ ವ್ಯಾಪಾರ ಆಗಿದೆ. ಅದೇ ಸಾಕು ಎಂದು ಹೇಳುತ್ತಾನೆ. ಅವನು ಕಾಯಿ, ಕರ್ಪೂರ, ಅರಿಶಿಣ, ಭಂಡಾರ ಊದಿನಕಡ್ಡಿ, ಲೋಬಾನ ದಾನ ಕೊಡುತ್ತಾರೆ. ಮನೆ ಮುಂದೆ ಹಂದರ ಹಾಕಿ ಜೋರು ಮಾಡುತ್ತೀರಿ ಎಂದು ಕೇಳುತ್ತಾಳೆ. ನಿನಗ ಜೋಡು ಮಾಡುತ್ತೇವಿ. ನಿನ್ನ ವಿವಾಹ ಆದ ನಂತರ ನಾವು ಮದುವೆ ಆಗುತ್ತೀವಿ ಎಂದನು. ಆಗ ನನಗೆ ಮದುವೆ ಬೇಡಣ್ಣ

ಎನ್ನುವಳು. ಕೊನೆಗೆ ಹುಟ್ಟಿದ್ದಲ್ಲಿಗೆ ಹೋಗಿ ಮದುವೆ ಆಗಲು ಒಪ್ಪುತ್ತಾಳೆ. ಈ ಪದ್ಧತಿಯು ಸ್ತ್ರೀಯರ ಯಾವುದೇ ಒಪ್ಪಿಗೆ ಇಲ್ಲದೇ ಸ್ವತಃ ಪುರುಷರೇ ತಮ್ಮ ಜವಾಬ್ದಾರಿ ಮರೆದು ಸ್ವಂತ ನಿರ್ಧಾರ ತೆಗೆದುಕೊಳ್ಳುತ್ತಿರುವುದು ತೋರುತ್ತದೆ. ಮದುವೆಗೆ ಅಡ್ಡಲ್ಲಿ ಬೇಡುವಳು.

"ಬಿಲ್ಲಿ ಅಡ್ಡಲ್ಲಿ
ಬಂಗಾರದ ಅಡ್ಡಲ್ಲಿ
ನೀರದಾಗ ಬರ್‍ತಾವ
ಹಗರ್‍ಯಾಗ
ಆಗ ಅಡ್ಡಲ್ಲಿ ತಂದು ನನ್ನ ಕೈಯಾಗಿಡ್ರಿ
ನಾನು ಗುಡ್ಡ ಏರ್‍ತಿನಿ
ಇಲ್ಲಿದ್ರ ಇಲ್ಲ
ಸರಿ ಬಿಡು ಅಂತ
ಕಾರ್ತಿಕ ರಾಜನೋರು ಓಡಿ ಬಂದ್ರು" [೪೨]

ಆಗ ಅಣ್ಣ ತಮ್ಮಂದಿರು ಒಟ್ಟಿಗಿದ್ದರೆ ಬೇಸದಲ್ಲ ಅಂತ ಜಂಟಿ ಇದ್ದ ಮನೆ ಮಾರಿ ಹೊಲ ಹಂಚಿಕೊಂಡು ತಮ್ಮ ತಮ್ಮ ಹೊಲದಲ್ಲಿ ಗುಡಿಸಲು ಹಾಕಿಕೊಂಡರು. ಮನೆಗೆ ಬೇಕಾದ ನೀರನ್ನು ಹಗರಿಗೆ ಬಂದು ತರಬೇಕು. ಇಬ್ಬರ ಮನಸ್ತಾಪವು ಈ ರೀತಿ ಮನೆಯ ಒಡೆಯಿತು. ದೊಡ್ಡವನ ಹೆಂಡತಿ ಒಂದು ಗಂಡು ಮಗುವಿನ ತಾಯಿ, ಚಿಕ್ಕವನ ಹೆಂಡತಿ ಬಸುರು ಇರುವಳು.ಇಬ್ಬರು ಕೊಡಗಳಲ್ಲಿ ನೀರು ತರಲು ಹಗರಿಗೆ ಬರುವಾಗ ಹಗರೀಲಿ ಅಡ್ಡಲ್ಗಿ ತೇಲಿ ಬರುವುದನ್ನು ನೋಡಿ ಯಾವುದೋ ದೇವರು ಅಂತ ತಿಳಿದು ಹಗರಿಯಲ್ಲಿ ಮುಳುಗುತ್ತಾರೆ. ಒಬ್ಬರಿಗೆ ಒಂದೊಂದು ಅಡ್ಡಲ್ಗಿ ಬೆಳ್ಳಿ-ಬಂಗಾರ ಬಂದು ಅದು ದೇವಿಯ ಅಡ್ಡಲ್ಗಿ ಆಗಿರುತ್ತದೆ. ಯಾವುದೇ ದೇವತೆಯ ಪೂಜೆ ಮಾಡುವಾಗ ಈ ತರಹದ ಟಡ್ಡಲ್ಗಿ, ಹೂವು, ವೀಳ್ಯೆದೆಲೆ, ಹಾಲು, ತುಪ್ಪ ಬಿಡುವುದು ಒಂದು ಸಂಪ್ರದಾಯವಾಗಿದೆ. ಇದು ಸಹ ತಲೆ ತಲಾಂತರದಿಂದ ಬಂದಿರುವ ರೂಢಿಗಳಾಗಿವೆ. ಈ ಅಡ್ಡಲ್ಗಿಗಳು ಇಲ್ಲದೇ ದೇವಿಯು ಯಾವುದೇ ಕಾರ್ಯ ನಡೆಯೊಲ್ಲ. ಅಡ್ಡಲ್ಗಿ ಪಡೆದ ದೇವಿಯು ಇಬ್ಬರಿಗರಿಗೆ ಒಂದೊಂದು ವರವ ಕೊಟ್ಟಳು. ಆ ವರಗಳು ಇಂತಿವೆ.

"ಮುತ್ತಿನ ಉಡಿಯಾಗ ಒಗ್ದು
ಏನಂತ ಹೆಸರಿಟ್ಟು
ನೋಡಮ್ಮ ನಿನ್ಗ ಒಬ್ಬೇ ಮಗ ಹುಟ್ಯಾನ
ಒಬ್ಬ ಮಗನಿದ್ದೆ ಊರಾಗ್ಬೇಕು
ನೋಡಮ್ಮಾ ನೀನು ಬಸುರೈದಿ
ನಿನಗೊಬ್ಬ ಮಗ ಹುಟ್ತಾನ
ಮಗನಿಂದ ಊರಾಗ್ಬೇಕು
ಈಗ ಬಸುರು ತಾಯಿ ಕೊಟ್ಟಿದ ಅಡ್ಡಲ್ಗಿ" [೪೩]

ಈ ರೀತಿಯಾಗಿ ವರವ ನೀಡಿ ಒಂದೇ ಮನಿಲಿದ್ದ ಊರಾಗ್ಬೇಕು ಎಂದು ಅರಿಶಿಣ, ಭಂಡಾರ, ನಿಂಬೆಕಾಯಿ, ಬೇವಿನ ತಪ್ಲ ಕೊಟ್ಟು ಪೂಜೆ ಮಾಡೆಂದು ಶುಕ್ರವಾರ, ಮಂಗಳವಾರ ದೇವಿವಾರ ಎಂದು ಹೇಳಲಾಯಿತು. ಈ ಎಲ್ಲಾ ವಸ್ತುಗಳು ದೇವಿ ಸಂಕೇತವಾಗಿ ಇಂದಿಗು ಬಳಸಲಾಗುತ್ತದೆ. ಅರಿಶೀಣ, ಭಂಡಾರ, ನಿಂಬೆಕಾಯಿ, ಬೇವಿನ ತಪ್ಲ ಎಲ್ಲ ವಸ್ತುಗಳು ಔಷಧೀಯ ಗುಣಗಳನ್ನು ಒಳಗೊಂಡಿದ್ದು ಆರೋಗ್ಯದ ದೃಷ್ಟಿಯಿಂದಾಗಿ ಮಹತ್ವ ಪಡೆದುಕೊಂಡಿವೆ. ದೇವಿ ಗುಡ್ಡ ಇಳಿದ ಮೇಲೆ ಏರುವುದಿಲ್ಲ ಆಗ ಮಡಿಮ್ಯಾಲೆ ಡೊಳ್ಳ ಹೊಡೆಯೋರು, ಮ್ಯಾಳ ಉದೋರು ಬಂದು ಶಾಸ್ತ್ರಿ ಬಂದು ಬೆಳ್ಳಿ ತಟ್ಯಾಗ ತಾಳಿ ಮುತ್ತು ತಂದು ಮಾಋುಷಿ ಜೊತೆಗೆ ವಿವಾಹ ಮಾಡಲು ಒಪ್ಪಿಕೊಂಡು ಹೊಳೆದಂಡಿಗೆ ಬಂದು, ಎಲ್ಲಮ್ಮ ಹುಟ್ಟಿದಲ್ಲಿಗೆ ಬಂದು ಬಾರೆಗಿಡದ ಸುತ್ತ ತಿರುಗಿ ಕಂಬ್ಳಿ ಹಾಸಿ ಸಾಸಿ ಹೊಯಿದರು. ದೇವಿ ಉಧೋ ಉಧೋ ಅಂತ ಹೊಳೀಲಿ ಮೂರು ಸರತಿ ಮುಳಿಗ್ಯಾಳೆ, ಸೀರೆ ಉಟ್ಯಾಳ, ಕುಬಸ ಉಟ್ಟುಕೊಂಡು ಗಂಧ ಹಚ್ಚಿದ ಸಾಸಿ ಹೊಯ್ದು ಬೆಳ್ಳಿ ತಟ್ಯಾಗ ತಾಳಿ ತಂದು ಬಾರೆಗಿಡಕ್ಕ ಬಿದಿರ ಪುಟ್ಟಿಗೆ, ಹುತ್ತಕ್ಕೆ ಪೂಜೆ ಮಾಡಿದಳು ದೇವಿ. ತಾಳಿಕಟ್ಟಿ, ಸೂಸ್ಗ ಹಾಕಿ, ಉಡಕ್ಕಿ ಹಾಕಿ, ಹಾಲಗಡಗ ಬಲಗೈಗೆ ಹಾಕಿ ಉಧೋ ಅಂತ ಯಲ್ಲಮ್ಮಗೆ ತಾಳಿ ಕಟ್ಯಾನ. ಆಗ ದೇವಿ ಎದ್ದು ಓಡಿ ಬಂದು ಗುಡ್ಡ ಏರಿ, ಗುಡಿ ಸುತ್ತ ತಿರುಗಿ ತನ್ನ ಮನೆ ಮುಂದೆ ಬರ್ರೊತ್ತಿಗೆ ಆಗ ಬಾಕಿಲಿಗೆ ಕುಂತಿದೇವಿ ನೀರ ಹಾಕಿ, ಭಂಡಾರ ಹಚ್ಚಿ, ಜ್ವಾಳದ ನಿಧಿ ಹಾಕಿ, ಉಧೋ ಉಧೋ ಅಂತ ಜಗಪುಟ್ಟಿ ಇಳಿಸಿದಳು. ಏಳ ಮಂದಿ ಅಣ್ಣಂದಿರು ನಮ್ಮ ತಂಗಿ ಹೋಗಿಬಿಟ್ಲು ಅಂತೇಳಿ ಹುಡುಕುತ್ತಾ ಹೊರಟಾಗ ಎಲ್ಲಮ್ಮ ಪ್ರಸಾದ ಒಂದು ತುತ್ತು ತಿನ್ನಬೇಕು. ಮಾಋುಷಿ ಏನ ಅಂದುಕೊಳ್ಳುತ್ತಾನೆ. ದೇವಿ ಪ್ರಸಾದ ತಿನ್ನಬೇಕು ಎಂದು ಅಲ್ಲಿಂದ ಕಾರ್ತಿಕ ರಾಜನೋವು ಮನಿಗೆ ಬಂದು ನೋಡಿದರೆ ದೇವಿ ಮನ್ಯಾಗ ಕುಂತಾವಳೆ. ದೇವಿ ಪ್ರಸಾದ ತಿಂದರಾ ಎಂದು ಕೇಳುತ್ತಾಳೆ. ಅಣ್ಣಂದಿರು ಮುರು ತುತ್ತು ತಿಂದು ಹಾಗೆ ಬಂದಿವಿ ಅಂದರು. ಆಗ ಮಾಋುಷಿ ಜಮ್ಮಿಗಿರಿ ಪಟ್ಟಣ ನನ್ನೆಸರಿಗೆ ಮಾಡಿಸಿ ಅಂತ ಕೇಳಿದ. ಆಗ ತಾಳಿ ಕಟ್ಟಿದ ಮೂರು ತಿಳಗಳಿಗೆ ಉಡಿ ತುಂಬಿ ಆಮೇಲೆ ರಾಜನ ಕೊಡೋದು ಅಂದಾಗ ಸರಿ ಅಂತೇಳಿ ಒಪ್ಪಿಕೊಳ್ಳುತ್ತಾರೆ. ಮದುವೆಯಾದ ನಂತರ ಎಲ್ಲಮ್ಮ ಪತಿಭಕ್ತಿಯು ಈ ರೀತಿಯಾಗಿ ಕಂಡುಬರುತ್ತದೆ.

### ಎಲ್ಲಮ್ಮನ ಪತಿಭಕ್ತಿ

ಈ ಕಾವ್ಯದಲ್ಲಿ ಯಲ್ಲಮ್ಮಳ ಪತಿಭಕ್ತಿಯು ತುಂಬಾ ಸೌಮ್ಯವಾಗಿ ಕಂಡುಬರುತ್ತದೆ. ಎಲ್ಲಮ್ಮ ತನ್ನ ಗಂಡನ ಸೇವೆ ಮನಪೂರ್ವಕವಾಗಿ ಮಾಡುತ್ತಾಳೆ. ತನಗೆ ಎಷ್ಟೇ ಕಷ್ಟಗಳು, ದುಃಖ, ಸಂಕಟ ಮೊದಲಾದ ಅನೇಕ ಸನ್ನಿವೇಷಗಳಿಗೆ ಮಣಿಯದೆ ಧೈರ್ಯವಾಗಿ ಎದುರಿಸಿ ನಿಲ್ಲುತ್ತಾಳೆ. ಆದರೆ ತನ್ನ ಗಂಡನ ಕಾಯಿಲೆ ವಾಸಿಯಾಗಲು ತನ್ನ ಎಲ್ಲ ಇಷ್ಟ ಭೋಗಗಳ ಲೆಕ್ಕಿಸದೆ ಆ ಕಾಯಿಲೆ ಸ್ವೀಕರಿಸುತ್ತಾಳೆ. ಮಾಋುಷಿಯು ಎಲ್ಲಮ್ಮಗೆ ಕಾಯಿಲೆ ಬಂದಾಗ ಯಾವುದೇ ಸಹಾಯ ನೀಡುವುದಿಲ್ಲ ಈ ಸನ್ನಿವೇಷವು ಸ್ತ್ರೀಯರ ಬಗೆಗಿನ ಪುರುಷರ ಮನಸ್ಥಿತಿ ಎಂತದ್ದು ಎಂದು ತಿಳಿಸುತ್ತದೆ.

ಎಲ್ಲಮ್ಮಗೆ ಮದುವೆಯಾಗಿ ಎರಡು ತಿಂಗಳಾದ ನಂತರ ಮಾಋುಷಿಯು ತನಗೆ ಆಸ್ತಿ, ಹಣ ಮತ್ತು ರಾಜ್ಯವನ್ನು ಕೇಳಿದಾಗ ಕಾರ್ತಿಕ ರಾಜನವರು ಆ ರಾಜ್ಯ ಕೊಡುವುದು ಇಷ್ಟವಿಲ್ಲದೇ ಉಪಾಯ ಅಥವಾ ಕಪಟದಿಂದ ಈ ಲೋಕದಲ್ಲೇ ಸಿಗಲಾರದ ಔಷಧೀಯ ಕಾಯಿಲೆಗೆ ತುತ್ತಾಗುವಂತೆ ಮತ್ತು

ಸಾಯಲಾರದ ಕಾಯಿಲೆ ಬರುವಂತೆ ಮಾಡವಂತೇಳಿ ಹಿರೇಬ್ಯಾನಿ ಬರುವಂತೆ ಮಾಡಿದರು. ಮಾಋಷಿಗೆ ಕೈಗೆ ಉಗುರಿಲ್ಲ, ಕಾಲಿಗೆ ಉಗುರಿಲ್ಲ, ಮೈ ತುಂಬಾ ಹುಣ್ಣಮ್ಮ ಹುಳಾ ಬಿದ್ದೆ ಬಿಟ್ಟಾವ, ಕೀವ ರೈತ ಇಳಿತೈತೆ, ಅನ್ನ ನುಂಗಾಕ ಬರದಾಗೆ ಬಾಯಿ ಹುಣ್ಣಾಗಿದೆ.

ಮಾಋಷಿಗೆ ಆದ ಈ ಪರಿಸ್ಥಿತಿಯು ಜಾನಪದರ ನಂಬಿಕೆಯಂತೆ ಪೌರಾಣಿಕ ಕಾಲದಿಂದಲೂ ಇರುವಂತಹ ಈ ಮಾಟ-ಮಂತ್ರ ಮೋಡಿ ವಿದ್ಯೆಯ ಪ್ರಭಾವವು ಇಂತಹ ಪರಿಸ್ಥಿತಿಗೆ ಕಾರನವಾಗಿದೆ. ಈ ರೋಗಕ್ಕೆ ತುತ್ತಾದ ಮಾಋಷಿಯ ಪರಿಸ್ಥಿತಿ ಈ ರೀತಿಯಾಗಿದೆ.

"ಮಣಕೈಲಿದ್ದ ಚರ್ಗಿ ಹಿಡ್ಕಂಡು
ನೀರ ಕುಡಿಬೇಕು
ಮುಗುಳಿ ಕೊಟ್ಟ ಡೇಗಕ್ಕಿಂತ ಹೋಗ್ಬೇಕು
ಕಾರ್ತಿಕ ರಾಜನೋರು ನೋಡ್ಬೇಕಲ್ಲ
ಆಗ ಇನ್ನ ತಳವಾರರು ನೋಡಿದ್ರು
ಏರ್ರಿ ಎಂಥಾ ಲುಚ್ಚಾದೋರು
ಎಂಥವರಪ್ಪ..
ಬ್ಯಾಡ ಅಂದ್ರೆ ಮದ್ವಿ ಮಾಡಿದ್ರಿ" [೪೪]

ದೇವಿ ಎಲ್ಲಮ್ಮ ಲೋಕ ಕಲ್ಯಾಣ ಮಾಡಾಕಿ ಅವಳ ಅಣ್ಣಂದಿರೆ ಈ ತರಹ ಅವಳ ಗಂಡನಿಗೆ ಮಾಡೋದು ಸರಿಯೇ ಹಣ ಎಂಬುದು ಯಾವ ರೀತಿಯಾಗಿ ಮಾನವೀಯತೆಯ ಅಂಶಗಳ ಸವಾರಿ ಮಾಡುತ್ತದೆ ಎಂಬುದಕ್ಕೆ ಇದೇ ನಿದರ್ಶನವಾಗಿದೆ. ಹೊನ್ನ ಹೆಣ್ಣು ಮಣ್ಣು ಈ ಮೂರು ಮಾನವರಿಗೆ ಬಹು ಪ್ರಮುಖ ಎನಿಸಿವೆ. ಇವುಗಳು ಎಷ್ಟೇ ಇದ್ದರೂ ಸಹ ತೃಪ್ತಿ ಎನಿಸದ ಮಾನವ ಎಂಥ ನೀಚ ಕೆಲಸಕ್ಕೆ ತೊಡಗುತ್ತಾನೆ ಎಂಬುದನ್ನು ಈ ಕಾವ್ಯದ ಮುಲಕ ತಿಳಿಯಬಹುದಾಗಿದೆ. ಎಲ್ಲಮ್ಮನ ಮುತ್ತೈದೆತನವ ತನ್ನ ಅಣ್ಣಂದಿರೆ ಕಸಿದುಕೊಂಡರು ಎಂದು ನೇರವಾಗಿ ಹೇಳುತ್ತಾರೆ. ಆದರೆ ಅಣ್ಣಂದಿರು ಬಂದು ತಂಗಿಯ ಮುಂದೆ ಅವಳ ಗಂಡನಿಗೆ ಆದ ಹಿರೇಬ್ಯಾನಿ ರೋಗ ನೆನೆದು ಅಳುತ್ತಾರೆ. ಈ ರೋಗದ ಲಕ್ಷಣ ಈ ರೀತಿ ಇದೆ.

"ಈಗ ಹಿರೇ ಬ್ಯಾನಿ
ಈತನ ಮುಟ್ಟಿದರೆ ಬ್ಯಾನಿ
ಜೀವಕ್ಕೆ ಕಲ್ತರೆ ಬ್ಯಾನಿ
ಆತ ಕಲಂತತಲ್ಲಿ ಕುಂತ್ರೆ ಬ್ಯಾನಿ
ಕಾವೆಳ್ಕೊಂಡ್ರೆ ಬ್ಯಾನಿ
ಉಗುಳಿದ್ದು ತುಳ್ದರೆ ಬ್ಯಾನಿ
ಗಾಳಿ ಬೀಸಿದರೆ ಬ್ಯಾನಿ
ಯಮ್ಮಾ ಮಗಳಾ" [೪೫]

ಅಣ್ಣಂದಿರು ನಾಟಕೀಯತೆಯಿಂದ ನಿನ್ನಗಂಡ ಉಳಿಯೋದಿಲ್ಲಾ, ನಿನ್ನ ಮುತ್ತೈದೆತನ ಹೋಯಿತು ಎಂದು ದುಃಖದಿ ಅಳುತ್ತಾರೆ. ಆದರೆ ದೇವಿ ನಗುತ್ತಾ ಹೇಗೆ ಮುತ್ತೈದೆತನ ಹೋಗುತ್ತದೆ ಎಂದು ಪ್ರಶ್ನಿಸುತ್ತಾಳೆ.

ಈ ರೋಗ ಹುಟ್ಟಿನಿಂದ ಇಲ್ಲ, ಇದು ನಡುವೆ ಬಂದಿದೆ. ನೀವು ಲೋಕ ತಿರುಗುವ ನೀವೇ ನನ್ನ ಗಂಡನ ಚನಾಗಿ ಆಗುವಂತೆ ಮಾಡಿರಿ. ನನ್ನ ಮುತ್ತೈದೆತನವನ್ನು ಕಾಪಾಡಿ. ನೀವು ನನ್ನ ಅರಿಶಿಣ, ಭಂಡಾರ ತೆಗಿಬ್ಯಾಡಿ ಎಂದು ಹೇಳುವುದು ಹೆಣ್ಣಿನ ಮುತ್ತೈದೆತನವು ಎಷ್ಟು ಮಹತ್ವ ಎಂಬುದು, ಅವಳಿಗೆ ತನ್ನ ಗಂಡನ ಸಾವಿನ ನಂತರದ ದಿನಗಳ ಬಗ್ಗೆ ಯೋಚಿಸುತ್ತಾಳೆ. ಗಂಡ ಸತ್ತ ನಂತರ ಹೆಣ್ಣಿನ ಬಗೆಗಿನ ಸಾಮಾಜಿಕ ವ್ಯವಸ್ಥೆ ಕಟ್ಟುಪಾಡುಗಳ ಎಷ್ಟು ಅಮಾನುಷವೆಂದರೆ ತಾಳಿ ತೆಗೆಯುವುದು, ಹೂವು–ಕುಂಕುಮ ಇಡಬಾರದು, ಕಾಲುಂಗುರ, ಬಳೆ ತೊಡುವಂತಿಲ್ಲ, ಶುಭ ಕಾರ್ಯಗಳಿಗೆ ಮುಂದಾಳತ್ವ ವಹಿಸುವಂತಿಲ್ಲ. ಮೊದಲಾದ ಅನೇಕ ನಿಯಮಗಳು ಅವಳಿಗೆ ಹಿಂಸಾತ್ಮಕವಾದವು. ತನ್ನತನವನ್ನೇ ಇಲ್ಲದಂತಹ ಸ್ಥಿತಿಯು ಉಂಟಾಗುತ್ತದೆ.

"ಅಂತ
ಮುತ್ತಿನ ಸೆರಗಲಿ ಸಿಂಬೆ ಮಾಡಿ
ಉಟ್ಟಿದ ಸೀರೆ ಕಾಸಿ ಹೊಯ್ದು
ಅಮ್ಮ ಗಂಡನ ಸುತ್ತ ತಿರುಗ್ಯಾಳಮ್ಮ
ಏ ಎರ್ಡು ಪಾದಗೆ ಶರಣು ಮಾಡ್ಯಾಳ
ತೋಥಡಿ ಗಂಡನ ಎತ್ಯಾಳ ಪುಟ್ಯಾಗ ಕುಂದ್ರಿಸಿಬಿಟ್ಟಾಳ ದೇವಿ
ಜಗ ಪುಟ್ಯಾಗ
ದೇವಿ ಉಧೋ ಅಂದಾಳ ತೆಲಿಮ್ಯಾಲ ಜಗ ಹೊತ್ತಾಳ ದೇವಿ
ತಕ ತಕ ದಿಕತ್ಯತಾ ತಂದಾನಾ" [೪೬]

ಆಗ ಅಣ್ಣಂದಿರು ನೀನು ಮತ್ತೆ ಜಮ್ಮಿಗಿರಿ ಪಟ್ಟಣಕ್ಕೆ ಬರಬಾರದು ಎಂದು ಹೇಳುತ್ತಾರೆ. ದೇವಿಯು ಓರಗಲ್ಲಿಗೆ ಬಂದಳು. ಅಲ್ಲಿ ಓರಗಲ್ಲು ಗೌಡ್ರು ನೋಡಿ ನೀನು ಊರ ಹೊರಗಿರಬೇಕು ಎಂದು ಹೇಳುತ್ತಾರೆ. ಏಕೆಂದರೆ ಆ ಹಿರೇಬ್ಯಾನಿ ರೋಗಕ್ಕೆ ಅಂಜಿ ಹಾಗೆ ಹೇಳುತ್ತಾರೆ. ತಾಯಿ ದೇವಿ ಭಿಕ್ಷೆ ಬೇಡಿ ಜೀವನ ಮಾಡ್ತೀನಿ ಎಂದಳು. ಒಂದು ಮುಚ್ಚಳದಾಗ ಗಂಜಿ, ಅಂಬಲಿ, ಮಜ್ಜಿಗಿ ಹಾಕಿ ಮಗಿತುಂಬ ನಿರ್ಹಾಕಿ ಬಿದುರು ಕೋಲಿಗೆ ಕಟ್ಟಿ ಕೊಟ್ಟರು. ಅಗಸಿ ಹೊರಗೆ ಇಟ್ಟರು. ರೋಗಕ್ಕೆ ಹೆದರಿದ ಗೌಡರು ಮತ್ತು ಜನರು ಊರಾಗೆ ಇರಬಾರದು ಅಂತೇಳಿ ಹೇಳಿದಾಗ ಮತ್ತೆ ಗಂಡನ ಜಗಪುಟ್ಯಾಗ ಹೊತ್ಕೊಂಡು ಕಣೆಕಲ್ ಕೆರೆಗೆ ಬಂದಳು. ಅಷ್ಟೊತ್ತಿಗೆ ಹುಣ್ಣೆಲ್ಲ ಮಾಯವಾಗಿ ಝಳವಾಗಿ ಮಾಣುಷಿ ಗುಣಮುಖನಾದನು. ಎಲ್ಲಮ್ಮನು ತೊಗಲ್ಹೊಗಿ ಕೆಂಪಾಗಿ ತೊಗಲಮ್ಮ ಆಗಿದ್ದಾಳೆ. ಆಗ ಮಾಣುಷಿಯು ಎಲ್ಲಮ್ಮನ ಪುಟ್ಯಾಗಿಂದ ಇಳಿದು ಗೇಣು ಗೇಣು ಮೀಸೆ ಬಿಟ್ಕೊಂಡು, ಎಡಗೈಲಿ ಬಾಕು ಗಂಡಗೊಡ್ಲಿ ಇಟ್ಕೊಂಡು ಎಲ್ಲಮ್ಮಗೆ ಎದುರಿಸಿ ಯಾರು ನೀನು ಅಂತ ಭಂಗ ಮಾಡುತ್ತಾನೆ. ಎಲ್ಲಮ್ಮ ಹೆದರಿ ಗದ

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ,ಹಂಪಿ.

ಗದ ನಡುಗುತ್ತಾಳೆ. ಅಡವೀಲಿ ಹೆದರಿಕೊಂಡ ಎಲ್ಲಮ್ಮ ನಾನು ಲೋಕದ ಮಗಳಪ್ಪ, ನಾನು ಭಂಡಾರ ಹಚ್ಚಾಕಿ, ಉಧೋ ಅಂಬಾಕಿ ಎಂದರು ಸಹ ನನ್ನಿಂದೆ ಬಾರೆ ಎಂದು ಕರೆದಾಗ ನಾನು ನಿನ್ನ ಮಗಳಪ್ಪ, ನೀನು ತಂದೆ ಎಂದರೂ ಕೇಳದೆ ಭಂಗ ಮಾಡುತ್ತಾನೆ. ಜಗಪುಟ್ಟಿ ಇಳಿಸಿ ಎರಡೂ ಪಾದಕ್ಕೆ ನಮಸ್ಕಾರ ಮಡಿದಾಗ ಮಾಖುಷಿ ನಗುತ್ತಾನೆ. ಸತ್ವ ಪರೀಕ್ಷೆಯಲ್ಲಿ ಎಲ್ಲಮ್ಮ ಸಿದ್ಧಳು. ಮಾಖುಷಿ ಮಲ್ಲಿಗೆ ಹೂವಾಗಿ ಬೆಳ್ಳಗಾಗಿದ್ದಾನೆ. ಆಗ ಎಲ್ಲಮ್ಮ ಜಗಪುಟ್ಟಿ ತಲೆಮ್ಯಾಲ ಹೊತ್ಕೊಂಡಳು.

"ಎಲ್ಲಮ್ಮಾಗ ಹಿಂದೆ ಬರ್ತಾಳ
ಮಾಖುಷಿನೆ ಮುಂದೆ ನಡಿತಾನೆ
ಅಂಟಿ ಮಾವಳಿ ಪಟ್ಣಗಾಗೆ ಬರ್ತಾರಾ
ಮಾಖುಷಿ ತಾಯಿ ತಂದಿ ಊರಿಗೆ" [೪೭]

ಈ ರೀತಿಯಾಗಿ ಎಲ್ಲಮ್ಮ ತನ್ನ ಪತಿಯ ಭಕ್ತಿ ಮುತ್ತೈದೆತನವು ಎಷ್ಟು ಮುಖ್ಯ ಎಂಬುದನ್ನು ತಿಳಿಯುವಂತೆ ಪತಿಭಕ್ತಿ ಮೆರೆದಿದ್ದಾಳೆ. ಪತಿ ಇಲ್ಲದ ಸ್ತ್ರೀಯ ಪರಿಸ್ಥಿತಿ ಕಲ್ಪನೆ ಅಸಾಧ್ಯ ಎನ್ನುವಂತೆ ಈ ಕಾವ್ಯ ಚಿತ್ರಣಗೊಂಡಿದೆ.

131820

**ಮಾಖುಷಿಯ ತಪಸ್ಸು ಚಿತ್ರಣ**

ಮಾಖುಷಿಗೆ ಬಂದಿರುವ ಕಾಯಿಲೆ ವಾಸಿಯಾಗುವುದಿಲ್ಲ ಏಳು ಲೋಕದಾಗ ಪಂಡಿತರಿಂದಲೂ ಯಾವುದೇ ಔಷಧಿ ಸಿಗುವುದಿಲ್ಲ. ಯಲ್ಲಮ್ಮ ಪತಿಭಕ್ತಿಯಿಂದ ಉಧೋ ಉಧೋ ಎನ್ನುತ ಒಂದು ಚರಗಿ ನೀರ ಕಾಲಿಗೆ ಹಾಕಿ, ಅರಿಶಿಣ ಭಂಡಾರ ಹಚ್ಚಿ ಬಲಪಾದ ಇಟ್ಟು ಬರುತ್ತಾಳೆ. ಅತ್ತೆ ಮಾವರ ಪಾದಕ ಶರಣು ಮಾಡಿ, ಪತಿಗೆ ನೀರ ಕಾಸಿ ಸ್ನಾನಕೆ ಕರಿಯುವಾಗ ಆಗ ಮಾಖುಷಿ ಹಿರೇಬ್ಯಾನಿ ಆಕಿಗೆ ಬರುತೈತೆ ಅಂತ ಎಲ್ಲಮ್ಮ ಮೈಮುಟ್ಟಬಾರದು ಎಂದು ಹೇಳುತ್ತಾನೆ.

"ಆ ಮಾಖುಷಿ
ಹೇಣ್ತಿ ಮುಖ ನೋಡಿ
ಪಳ ಪಳ ಪಳ ಪಳ ದುಃಕ ಮಾಡ್ತಾನ
ಈಗ ನನ್ನ ಮುಟ್ಟಿದ್ರೆ ಮತ್ತೆ ನನ್ಗ ಬರ್ತೈತಿ ಬ್ಯಾನಿ
ಹಿರೇಬ್ಯಾನಿ
ಈಗ ನನ್ನ ಬ್ಯಾನಿ ಅವ್ಳಿಗೆ ಹೋಗ್ಯೆತಿ
ಇವಾಗ ಅವ್ಳು ನನ್ನ ಮೈ ಮುಟ್ಟಿದ್ರೆ
ನನ್ಗ ಬ್ಯಾನಿ ಬರೋದಿಲ್ಲ?" [೪೮]

ಮಾಖುಷಿ ತನ್ನ ಕಾಯಿಲೆ ಗುಣವಾದ ನಂತರ ತನ್ನ ಪತ್ನಿ ಯಲ್ಲಮ್ಮನ ಸೇವೆಯಾಗಲಿ, ಸಹಾಯವಾಗಲಿ ಮಾಡುವುದನ್ನು ನಿರಾಕರಿಸುತ್ತಾನೆ. ಈ ದುಷ್ಟ ಲೋಕದಾಗ ಕರ್ಮಲೋಕದಾಗ ಯಾರ ಹೆಂಡ್ತಿ ಮಕ್ಕಳ ನೋಡ್ಕೊಂಡು ಇರಬೇಕು ಅಂತ ಆಗ ಪಳ ಪಳ ದುಃಖ ಮಾಡುತ್ತಾನೆ. ಈ

ರೋಗವು ಅಂಟು ರೋಗ ಜಾಡ್ಯವಾಗಿದ್ದು, ಸಾಂಕ್ರಾಮಿಕ ರೋಗದ ತರಹ ಒಬ್ಬರಿಂದ ಒಬ್ಬರಿಗೆ ವರ್ಗಾವಣೆ ಗುಣ ಹೊಂದಿದೆ. ಮುಟ್ಟಿದರೆ ಗಾಳಿ ಸೋಕಿದರೆ ಈ ರೋಗ ಮತ್ತೊಬ್ಬರಿಗೆ ಹರಡುತ್ತದೆ. ಮಾಋಷಿಗೆ ಬಿಸಿನೀರ ಸ್ನಾನ ಮಾಡಲು ಯಲ್ಲಮ್ಮ ಹೇಳುತ್ತಾರೆ. ಮಾಋಷಿ ಬಿಸಿನೀರಿಗೆ ಮೈ ಉರಿತೈತೆ ತಣ್ಣೀರ ಸ್ನಾನ ಮಾಡುವೆ, ನನಗ ಸ್ವಲ್ಪ ನೀರು ಹತ್ತ ಕೊಡ ನೀರು ಆಗದಿಲ್ಲ ಹೊಳಿದಂಡಿಗೆ ಹೋಗಿ ಕುಂದ್ರತಿನಿ ನೀರ ಎರಿಬೇಕು ಆಗ ಎರಡು ದಿನ ನೀರು ಎರೆದರೆ ತೊಗ್ಲು ನೆನಿತೈತಿ ಮೈ ತಣ್ಣಗಾಗತೈತಿ ಎನ್ನುತ್ತಾನೆ. ಆಗ ದೇವಿ ಸರಿ ಅಂತಾಳೆ. ದುಃಖ ಮಾಡ್ತಾಳೆ. ಆಗ,

"ಆಯಿತಲ್ಲ ಇಲ್ಲೆ ಲೋಕ
ದುಷ್ಟ ಲೋಕ ನನ್ಗೆ ಎಲ್ಲ
ಧರ್ಮಲೋಕ ನನ್ಗೆ ಎಲ್ಲ
ತಾನು ದುಃಖ ಮಾಡ್ತಾನೆ
ಮಾಋಷಿ ಬರ್ತಾನಾ..
ತಂದಾನಾ" ೪೯

ಆಗ ಹೊಳಿದಂಡೆಲಿ ಏಳ ಸಮುದ್ರ ಕಲಿಯೋತಲ್ಲಿ ಬಂದು ಅಲ್ಲಿ ಸ್ನಾನ ಮಾಡುತ್ತಾನೆ. ನಂತರ ಹೊಳಿದಂಡೇಲಿ ಆಲದಮರ ಸುತ್ತಿ ತಪಸ್ಸಿಗೆ ಕುಂತ ಮಾಋಷಿ ಯಾಕೆಂದರೆ ದುಷ್ಟಲೋಕದ, ಕರ್ಮಲೋಕದಾಗ ಇಲ್ಲದ್ದು ಅಂತ ಕಣ್ಣ ಮುಚ್ಕೊಂಡು ಅನ್ನ ಇಲ್ಲದೆ, ನೀರು ಇಲ್ಲದೆ ಒಂದು ತಿಂಗಳು ಗಡ್ಡ ಬೆಳೆದಿದೆ. ಮೀಸೆ ಬೆಳೆದಿವೆ. ಒಂದೇ ಮನಸ್ಸಿನಿಂದ ಕುಳಿತವನೆ. ಒಂದು ತಿಂಗಳ ನಂತರ ಒಂದು ದಿನ ಪಾರ್ವತಿ ಪರಮೇಶ್ವರ ಈಗ ಸಮುದ್ರದಲ್ಲಿ ಸ್ನಾನ ಮಾಡ್ಬೇಕಂತ ಸ್ವರ್ಗದಿಂದ ಬಂದು ಪಾರ್ವತಿ ಶಿವನಿಗೆ ಹೂವಲ್ಲಿ ಹುಟ್ಟಿದ ಮಗ ಮಾಋಷಿ ತಪಸ್ಸಿಗೆ ಕುಂತವನೆ. ಅವನಿಗೆ ಯಾವ ಕಷ್ಟ ಬಂದಿದೆಯೊ ಈ ಲೋಕದ ವಿಚಾರ ಕೇಳೋಣಾ, ನಿನಗೆ ಯಾವ ವನವಾಸ ಬಂದೈತೆ ತಪಸ್ಸು ಬಿಡು, ಕಣ್ಣ ತೆರಿ, ಎದ್ದೇಳು ಜೋಡ್ಸಿಸ ಕೈಬಿಡು ಎಂದರು. ಆಗ ಮಾಋಷಿ ತಪಸ್ಸು ಬಿಡಲಿಲ್ಲ. ಆಗ ಪಾರ್ವತಿಗೆ ಕೇಳಿದ ಪಾರ್ವತಿ ಹೇಳುವಳು ಎಲ್ಲಮ್ಮಗೆ ಹಿರೇಬ್ಯಾನಿ ಇದ್ದುದರಿಂದ ಈ ದುಷ್ಟ ಲೋಕದಾಗ ಇರಬಾರ್ದಂತ ತಪಸ್ಸಿಗೆ ಕುಂತವ್ನೆ ಎಂದಳು. ಆಗ ಮುಂದೆ ಒಂದು ಉಪಾಯ ಮಾಡಿ ತಮ್ಮಲ್ಲಿರುವ ಕಲ್ಪವೃಕ್ಷದ ಕಾಮದೇವತೆ ಐತಿ ಅದನ್ನು ಅವನ ಹತ್ರ ಬಿಟ್ರೆ ದಿನಾಲು ಹಾಲು ಬಿಟ್ಟು ಬರುತ್ತೆ ಅಂತ ಯೋಚಿಸುತ್ತಾರೆ. ನಂತರ ಸ್ನಾನ ಮಾಡಿ ಹೋಗೋಣ ಅಂತ ಮೈ ತೊಳೆದುಕೊಂಡು ರಥದಾಗ ಕುಳಿತರು. ಕಲ್ಪವೃಕ್ಷ ಕಾಮದೇವ್ತಿಗೆ ಮಾಋಷಿಗೆ ಹಾಲು ಬಿಡಲು ಹೇಳಿದ ನಂತರ ಏಳು ಸಮುದ್ರ ಹೊಳಿದಂಡಿಗಿ ಗಿಡಮ್ಯಾಲಿಂದ ಹಾಲು ಬಿಡು ಎಂದು ಹೇಳಿದರು. ಆಗ ಕಾಮದೇನು ಕಲ್ಪವೃಕ್ಷವು,

"ಬಡಬಡ ಬಡ ಬಡ ರೆಕ್ಕೆ ಹೊಡೆತು
ಗರ್ ಗರ್ ಗರ್‌ಗರ್ ತಿರುಗಿಕ್ಯಂತ ಬಂತು
ಗಿಡಮ್ಯಾಲೆ ಯಮ್ಮಕುಂತೆ ಬಿಟೈತಿ" ೫೦

ಗಿಡಮ್ಯಾಲೆ ಕುಂತ ಕಾಮದೇನು ಕಲ್ಪವೃಕ್ಷ ಹಾಲನ್ನು ಒಂದೇ ಎಡಗೈ ದಪ್ಪ ಹೆಬ್ಬೆಟ್ಟು ದಪ್ಪ ಹಾಲು ಬಿಡುತ್ತದೆ. ನಂತರ ಹನ್ನೆರಡು ಗಂಟ್ಯಾಗ ಕಾರ್ತಿಕ ರಾಜನೋವ್ರು. ಗುಡ್ಡದಾಗ ಇರೋರು

ಬ್ಯಾಟೆ ಆಡಕೋಂತ ತಪ್ಪಲು ಹೊಡ್ಕೋಂತ ಬಂದ್ರು ಸೂರ್ಪಣಕಿ ತಂಗಿ ಇವತು ಹೋಗಬ್ಯಾಡ್ರಿ ಅಂತ ಹೇಳಿದ್ದಕ್ಕೆ ಆಗ ಅಲ್ಲೇ ಕುಂತ್ಕೊಂಡ್ರು. ಈ ತಪಸ್ಸು ಪೌರಾಣಿಕ ಕಾಲದಿಂದಲೂ ಆಲದ ಮರದ ಕೆಳಗೆ ಕುಂಡ್ರುವ ವಾಡಿಕೆ. ಏಕೆಂದರೆ ಇದು ಶುದ್ಧ ಆಮ್ಲಜನಕ ನೀಡುವ ಮರವಾಗಿದೆ. ಉತ್ತಮ ಗಾಳಿ, ನೆರಳು ನೀಡುತ್ತದೆ. ಈ ಕಾಮದೇನು ಕಲ್ಪವೃಕ್ಷವು ಬೇಡಿದ್ದ ನೀಡುವ ಗುಣಕ್ಕೆ ಹೋಲಿಸಿದ್ದಾರೆ. ಒಟ್ಟಾರೆ ಮಾಋಷಿ ತನ್ನ ಮತ್ತು ಎಲ್ಲಮ್ಮನ ಹಿರೇಬ್ಯಾನಿ ನಿವಾರಣೆ ಆದರಿಂದ ಬೇಸತ್ತು ದೇವರಲ್ಲಿ ಪ್ರಾರ್ಥಿಸುವ ಸಲುವಾಗಿ ತಪಸ್ಸು ಮಾಡುತ್ತಾನೆ. ಸಾಕ್ಷಾತ್ ಶಿವ-ಪಾರ್ವತಿ ಬಂದು ಮಾತನಾಡಿಸಿದರು ಮಾತನಾಡದಂತೆ ಏಕಾಗ್ರ ಚಿತ್ತದಿಂದ ತಪಸ್ಸು ಮಾಡಿದ ಪರ ಈ ಕಥನ ಕಾವ್ಯದಲ್ಲಿ ಸೊಗಸಾಗಿ ಮೂಡಿಬಂದಿದೆ.

**ಹಿರೇಬ್ಯಾನಿ ರೋಗದಿಂದ ನರಳಿದ ಎಲ್ಲಮ್ಮ**

ಎಲ್ಲಮ್ಮನನ್ನು ಗಂಡ ಬಿಟ್ಟು ಹೋದ ನಂತರ,
"ಹಿರೇಬ್ಯಾನಿ ಎಲ್ಲಮ್ಮಗೆ ಬಂದೈತೊ
ಯಮ್ಮ ಕೈಯಿಗಿ ಉಗರಿಲ್ಲೆ ಯಮ್ಮ ಕಾಲಿಗಿ ಉಗರಿಲ್ಲೆ
ಯಮ್ಮ ಮೈತುಂಬ ಹುಣ್ಣಮ್ಮೊ ಕಿಂವರಕ್ತ ಬೀಳ್ತೈತೋ
ಹೇನ ನೋಡಮ್ಮ ಮೈಯಾಗ ಇಳ್ದೇ ಇಟ್ಟಾವೋ" ೫೧

ರೇಣುಕಾ ಎಲ್ಲಮ್ಮಳಿಗೆ ಹಿರೇಬ್ಯಾನಿ ರೋಗ ಬಂದು ಗಂಡ ಅವಳನ್ನು ಬಿಟ್ಟು ಹೋಗುತ್ತಾನೆ. ಆಗ ಎಲ್ಲಮ್ಮಗೆ ಮೈಯೆಲ್ಲಾ ಹುಣ್ಣಾಗುತ್ತದೆ. ರೇಣುಕಾ ಎಲ್ಲಮ್ಮಳ ಕೈಗೆ ಉಗುರಿಲ್ಲ, ಕಾಲಿಗೆ ಉಗುರಿಲ್ಲ, ಮೈ ತುಂಬಾ ಹುಣ್ಣು ತುಂಬಿದೆ. ಕೀವು ರಕ್ತ ಬೀಳುತೈತಿ ಹೇನು ಬಿದ್ದಿವೆ. ಅವಳು ನೋಡಲು ಅಸಹ್ಯ ಸ್ಥಿತಿಗೆ ಹೋಗಿದ್ದಾಳೆ. ಇಂಥಹ ಸಂದರ್ಭದಲ್ಲಿ ಮಾಋಷಿ ಅವಳಿಗೆ ಸಹಾಯ ಮಾಡದೆ ಬಿಟ್ಟು ಹೋಗಿದ್ದಾನೆ. ಆಗ ಅವಳನ್ನು ಚೌಡಿಕ್ಯಾ ಮಾದೇವಿ ನೋಡಿದ್ಲು. ನೋಡಿ ಹೀಗೆ ಹೇಳುತ್ತಾಳೆ.

"ಆಗ ನೋಡಿಬಿಟ್ಟು ರೇಣುಕಾ ದೇವಿನ್ನ
ಅತ್ತ ಚೌಡಿಕ್ಯಾ ಮಾದೇವಿ ನೋಡಿದ್ಳು
ಚೌಡಿಕ್ಯಾ ಮಾದೇವಿ ನೋಡಿ ಏನಂತಾಳ
ಏ.. ಏನಂತಾರ ಊರಾಗ ಮಂದಿ
ಆಗ ಹಿರೇಬ್ಯಾನಿದವ್ವನ ತಂದು
ಮನ್ಯಾಗ ಇಟ್ಕೋಂಡಿ ಅಂತಾರ
ಊರಿಗೆಲ್ಲ ನಮ್ಮ ಊರಿಗೆ ಬ್ಯಾನಿ ಬರ್ತೈತಿ" ೫೨

ರೇಣುಕಾ ಎಲ್ಲಮ್ಮಳ ಸ್ಥಿತಿ ಕಂಡು, ಹಿರೇಬ್ಯಾನಿ ರೋಗಕ್ಕೆ ಅಂಜಿದ ಊರಿನ ಜನರೆಲ್ಲ ಹೆದರುತ್ತಾರೆ. ಚಾಡಿಕ್ಯಾ ಮಾದೇವಿ ಹಿರೇಬ್ಯಾನಿ ಬಂದಿರುವ ಎಲ್ಲಮ್ಮಳ ಊರಾಗ ತಂದಿಟ್ಟುಕೊಂಡಾರೆ. ಮನೇಲಿ ಇಟ್ಟುಕೊಂಡ್ಯಾರ ಅದು ನಮ್ಮ ಊರಿಗೆಲ್ಲ ಬ್ಯಾನಿ ಬರುವಂತ ರೋಗ ಅಂತಾ ಬೈತಾಳೆ. ಅತ್ತೆ ಸೊಸೆಯಂದಿರ ಜಗಳ ಮತ್ತು ಯಲ್ಲಮ್ಮನ ಸ್ಥಿತಿ ಇಲ್ಲಿ ವ್ಯಕ್ತವಾಗುತ್ತದೆ.

"ಏ.. ಒದಿಬೇಕಲೇ ನೀನು ಊರ ಬಿಡಲೇ ಲೋಕ
ಯಮ್ಮಾ ಕೋಲೆ ಹಿಡ್ದಾಳ ಅತೆ ಇನ್ನ ನೋಡಮ್ಮ
ಆಗ ಮನಿಬಿಟ್ಟು ಹೊಗು" [೫೩]

ಚೌಡಿಕ್ಯಾ ಮಾದೇವಿಯ ಸಂಕಟವು ತನ್ನ ಮಗನೇ ಮನೆಬಿಟ್ಟು ಹೋಗಿದ್ದಾನೆ. ಅಂತಹ ಸಂದರ್ಭದಲ್ಲಿ ಇ ಹಿರೇಬ್ಯಾನಿ ರೋಗದ ಎಲ್ಲಮ್ಮಳು ಬೇಕಾಗಿಲ್ಲ. ತನ್ನ ಕೀರ್ತಿ ಬೆಳಗುವಂತ ಮಗನೇ ಇಲ್ಲ ಆದ ಕಾರಣ ಮಗನ ಪ್ರೀತಿಯು ಎಲ್ಲಮ್ಮನ ಹಿಂಸೆಗೆ ಕಾರಣವಾಗಿದೆ. ಗಂಡು ಮಗುವಿನ ಮೇಲಿನ ವ್ಯಾಮೋಹ ಇದಕ್ಕೆ ಕಾರಣವಾಗಿದೆ. ತಮ್ಮ ವಂಶದ ದೀಪವೆಂದು, ವಂಶ ಬೆಳಗುವುದು, ಕೀರ್ತಿ ಹೆಚ್ಚಿಸುವುದು ಗಂಡು ಮಗು ಎನ್ನುವ ನಂಬಿಕೆ ಇದ್ದ ಕಾರಣ ಈ ರೀತಿಯಾಗಲು ಕಾರಣವಾಗುತ್ತದೆ. ಚೌಡಿಕೆ ಮಾದೇವಿಯು ನನ್ನ ಜೀವಕ್ಕೆ ಹುಟ್ಟಿದ ಮಗನೇ ಹೋದ ಮೇಲೆ ನೀನೇನು ವಿಶೇಷ ಎಂದು ಹಾದರಗಿತ್ತಿ ಕಂಡವರಿಗೆ ಬದುಕೋಳು ಎಂದು ಕಂಡ ಬ್ಯಾನಿ ತಂದವಳು. ಕಂಡವರಿಗೆ ಸೆರಗ ಹಾಸುವ ನೀನು ದೇಶ ತಿರುಗುವ ನೀನು ಮನೆಯಲ್ಲಿ ಇರಬೇಡ ಎಂದು ಅವಮಾನಿಸುತ್ತಾಳೆ. ಇಂತಹ ಸಂದರ್ಭದಲ್ಲಿ ಅಸಹಾಯಕ ಎಲ್ಲಮ್ಮ ಅತ್ತೆ ನನಗೆ ಕಾಲಿಲ್ಲ, ಕೈಯಿಲ್ಲ ನನಗೆ ಹಿರೇಬ್ಯಾನಿ ಬಂದಿದೆ. ಇಂತಹ ಕಾಯಿಲೆ ಬಂದಿರುವ ಸ್ಥಿತಿಯಲ್ಲಿ ನಾನು ಎಲ್ಲಿಗೆ ಹೋಗಲಿ ಎಂದು ಅತ್ತೆಗೆ ಶರಣು ಮಾಡುತ್ತಾಳೆ. ಆಗ ಎಲ್ಲಮ್ಮ ಒಂದು ಗಂಗಾಳ ಕೊಡು ಅತ್ತೆ, ಒಂದು ಗೋಣಿಚೀಲ ಕೊಡು, ಒಂದು ಚರಗಿ ಕೊಡು. ನಾನು ಬಂಕದಾಣೆ ಇರುತ್ತೇನೆ ಎಂದರೂ ಸಹ ಈ ಮನಿಯಾಗ ಇರಬಾರದು, ಈ ಊರಾಗ ಇರಬಾರದು ಹಿರೇಬ್ಯಾನಿ ಬಂದವಳು. ಜನ ಹಿರೇಬ್ಯಾನಿ ಬಂದವರು ಇದ್ದರೆ ಏನು ಹೇಳುವುದು ಎಂದು ಊರ ಬಿಡಬೇಕು ಇಲ್ಲದಿದ್ದರೆ ನಿನ್ನ ಹಿರೇಬ್ಯಾನಿ ನೋಡಿ ಜನ ಊರ ಬಿಡ್ತಾರೆ ಎಂದು ಹೇಳುತ್ತಾಳೆ.

ಆಗ ಎಲ್ಲಮ್ಮ ಅಸಹಾಯಕ ಸ್ಥಿತಿಯಿಂದ ಪರಮಾತ್ಮನಲ್ಲಿ ಪ್ರಾರ್ಥಿಸಿ ಹೋಗಲಿ ಅಂತೇಳಿ ಗೋಣಿಚೀಲ ಹೆಗಲಿಗೆ ಹಾಕಿದ್ರು ಈಗ ಮಣ್ಣು ಮುಚ್ಚಳ ಜಗ ಪುಟ್ಯಾಗ ಇಟ್ಕೊಂಡ್ಲು ಹೊಟ್ಟೆಗೆ ಆನಿಸಿಕೊಂಡು ಜಗಪುಟ್ಟಿನ ದೇಕೊಂಡು ದೇಕೊಂಡು ಬರ್ತಾಳೆ ಎಲ್ಲಮ್ಮ ದುಃಖದಿಂದ ಅಸಹಾಯಕ ಸ್ಥಿತಿಯು ಯಾವುದೇ ಹೆಣ್ಣಿಗೆ ಬಾರದಂತ ದುಃಖ ಪಡುವಂತಾಗಿದೆ. ಇಂತಹ ಸ್ಥಿತಿ ಹೆಣ್ಣು ಅನುಭವಿಸುವಂತಾಗಿದ್ದು, ಅಸಹಾಯಕ ಹೆಣ್ಣು ದಿಕ್ಕು ತೋಚದಂತಾಗಿದೆ. ಅನೇಕ ಪುರುಷ ಪ್ರಧಾನತೆ ಸಮುದಾಯಗಳಲ್ಲಿ ಇದೇ ರೀತಿಯ ಹೆಣ್ಣಿನ ಸ್ಥಿತಿಗತಿಗಳನ್ನು ಕಾಣಲಾಗುತ್ತಿದೆ

ಎಲ್ಲಮ್ಮ ಹೊರಬಾಗಿಲಿಗೆ ದೇಕೊಂಡು ಬಂದು ದುಃಖ ಮಾಡುತ್ತಾ ಓರಗಲ್ಲಿಗೆ ಬಂದು, ಗೌಡ್ರೆ, ಓರಟಾಯವ್ರೆ ಉಧೋ ಅಂದಳು. ಎಲ್ಲಾರು ನೋಡಿ ನೀನು ಜೋಗಮ್ಮ ಏನು ಎಂದು ಕೇಳುತ್ತಾರೆ. ಅಲ್ಲ ನನಗೆ ಹಿರೇಬ್ಯಾನಿ ಬಂದೈತಿ ಅಂತ ಹೇಳುತ್ತಾಳೆ. ನಾನು ಊರಿಗೆ ಮಗಳು, ನಿಮಗೆಲ್ಲಾ ಭಂಡಾರ ಹಚ್ಚುವಾಕಿ, ನನ್ನ ಬ್ಯಾನಿ ಬೇಸ್ ಮಾಡಿರಿ, ಈ ಹಿರೇಬ್ಯಾನಿಗೆ ಔಷಧಿ ಕೊಡರಿ ಅಂತಾಳೆ. ಆಗ ನೀನು ದೇವರ ಮಗಳು, ನಿನ್ನ ಮ್ಯಾಲೆ ದೇವರಿದ್ರ ಹೆಂಗ ಹಿರೇಬ್ಯಾನಿ ಬರುತ್ತದೆ.ರೊಗ ಹೆಂಗ ಬರುತ್ತದೆ ಎಂದು ಪ್ರಶ್ನಿಸುತ್ತಾರೆ. ಪ್ರಶ್ನಿಸಿ ಹೀಯಾಳಿಸುವ ಪರಿಯು ಈ ರೀತಿಯಾಗಿದೆ.

"ಕಂಡವ್ರಿಗೆ ಹೊಗೋವ್ವೆ ಕಂಡ ಬ್ಯಾನಿ ತಂದವ್ವೆ
ನೀನು ದೇವ್ರಿಗೆ ಕೆಡ್ಸವಳೆ ನೀನು ದುಷ್ಟದವಳಲೆ
ದೇವ್ರಿಗೆ ಕೆಡಸ್ತಿ" [೫೪]

ಎಲ್ಲಮ್ಮನ ಕಾರ್ಯಗಳು ನಡತೆಯನ್ನು ಮೆಚ್ಚದೆ ಹಿಯಾಳಿಸುತ್ತಾರೆ. ಕಂಡವ್ರಿಗೆ ಹೋಗುವವಳು, ಕಂಡ ಬ್ಯಾನಿ ತಂದವಳು ನೀನು ದೇವರಿಗೆ ಅಪಮಾನ ಮಾಡಿದೀಯ ದುಷ್ಟದವಳು ನಿನು ದೇವರಿಗೆ ಕೆಡಸ್ತಿದಿಯ ಅಂತೇಳಿ ಓರಗಲ್ಲ ಹುಡುಗರ ಕರೆದು ಎಲ್ಲಮ್ಮಗ ಒಡಿಸಿರಿ ಎಂದು ಹೇಳುತ್ತಾರೆ. ಬೇಲಿ ತಗಂಡು ಒಗಿತಾರೆ. ಕಟ್ಟಿಗೆ ತಗಂಡು ತಿವಿತಾರೆ. ನಡಿ ಅಂತ ಹಿಂಸಿಸುತ್ತಾರೆ. ಆಗ ಎಲ್ಲಮ್ಮ ಅಯ್ಯೋ ಪರಮಾತ್ಮ ನಾನು ಏನ ಪಾಪ ಮಾಡಿನಿ, ಏನ ಕರ್ಮ ಮಾಡಿನಿ ಅಂತ ದುಷ್ಟಲೊಕದಾಗಿನ ಏನ ಕರ್ಮ ಮಾಡೀನಿ ನಮ್ಮ ಅಣ್ಣಂದಿರ ಮಾತ ನಾನೇ ಕೇಳಲಿಲ್ಲ ಅಂತ ದೇಕೊಂಡು ದೇಕೊಂಡು ಗುಡ್ಡ ಏರ್‍ಯಾಳ ದೇವಿ ಜಗಪುಟ್ಟಿ ಜೊತೆಯಲ್ಲಿ ಇದೆ. ಉಧೋ ಉಧೋ ಅಂತ ಅಂದ್ಲು. ಆಗ ಏಳ ಮಂದಿ ಅಣ್ಣಗಳು ನೋಡಿದರು. ಆಗ ತಲಿ ತಲಿ ಹಿಡ್ಕೊಂಡು ಅಳ್ತಾರೆ. ದುಃಖ ಮಾಡ್ತಾರೆ. ಬ್ಯಾಡ ಬ್ಯಾಡ ಅಂದ್ರು ಹೋದೆ ತಂಗಿ ನಿನಗೆ ರೋಗ ಬಂತು ಹಿರೇಬ್ಯಾನಿ ರೋಗ ಬಂತು ನಿನಗೆ ಈ ರೋಗಕ್ಕೆ ಈ ಲೋಕಕ್ಕೆ ತಿರುಗಿದ್ರು ಔಷಧಿ ಸಿಗೋದಿಲ್ಲ ಅಂತ ದುಃಖಿಸುತ್ತಾ ನಿನ್ನ ಬಣ್ಣ ಯತ್ತಾಗ ಹೋಯ್ತು ಈ ಕರೆ ಬಣ್ಣ ಕಾಕಿಬಣ್ಣ ಆಗಿಯ ಎಂದಾಗ ಎಲ್ಲಮ್ಮ ಅಳಲು ಈ ರೀತಿ ವ್ಯಕ್ತವಾಗಿದೆ.

"ಅಣ್ಣ ಏಳು ಮಂದಿ ಕಾರ್ತಿಕ ರಾಜನವ್ರೆ
ನನ್ನ ಜಲ್ಮ ಉಳ್ಸಿಕೋರೆಣ್ಣ
ನನ್ನ ಜೀವ ಕಳಿಬ್ಯಾಡ್ರಿ
ನಾವೇನು ಮಾಡಾನೇ ತಂಗಿ
ಆಗ ನಮ್ಮ ಮಾತು ಕೇಳಲಿಲ್ಲ
ಹಿಂದ ಹುಟ್ಟಿದವಳಲ್ಲ
ಮುಂದ ಹುಟ್ಟಿದವಳಲ್ಲ
ನಮ್ಮ ಮಾತ ಕೇಳಲಾತವ್ವ
ಜೀವದ ಗಂಡಂತ ಹೋದವ್ವ
ಜೀವ ಗಂಡನತಲ್ಲಿ ನೀನ್ಹೋಗೆ ಬಿಡಮ್ಮ
ಏ.. ಜಲ್ಮ ಗಂಡನತಲ್ಲಿಗೆ ಹೋಗಿ ಜಲ್ಮ ಕಳಿಯಮ್ಮ
ಅಲ್ಲಿ ಜೀವಕಳಿ" [೫೫]

ರೇಣುಕೆಯ ಎಲ್ಲಮ್ಮಳು ಅಣ್ಣರ ಮಾತು ಕೇಳಲಾರದಂಗ ಗಂಡನ ಜೊತೆಗೆ ಹೋಗಿದ್ದ ಕಾರಣ ಅವಳಿಗೆ ಯಾವುದೇ ಸಹಾಯ ಮಾಡಲು ನಿರಾಕರಿಸುತ್ತಾರೆ. ತನ್ನ ಗಂಡನಲ್ಲಿಗೆ ಹೋಗಿ ಜೀವನ ಮಾಡಮ್ಮ ಎಂದು ನೀನೇನು ನಮ್ಮ ಹಿಂದೆ-ಮುಂದೆ ಹುಟ್ಟಿದವಳಲ್ಲ ಎಂದು ನಿಂದಿಸುತ್ತಾರೆ. ಬುದ್ಧಿ ಇಲ್ದೆ ಮಕಾ ತೋರಿಸಕ ಬಂದೀಯ ಅಲ್ಲಿ ಹೋಗಿ ಜೀವ ಬಿಡು ಎಂದಾಗ ಆಗ ಎಲ್ಲಮ್ಮ ಅಣ್ಣಂದಿರಿಗೆ ನಿಮ್ಮ ಜಲ್ಮ ಎಂಥ ಕಠಿಣ, ಅಕ್ಕ-ತಂಗಿಯರು ಇಲ್ದಂಗೆ ಹುಟ್ಟಿದೋರು ನೀವು ಎಂದು ಬೈಯುವಾಗ ಕುಂತಿದೇವಿ ಬಂದು ಅಮ್ಮ ಮೂರು ತಿಂಗಳ ಕೂಸು ಹೊತ್ಕೊಂಡು ಬಂದ್ರು ಆಗರ ಸಾಯಲಿಲ್ಲ ಎಂಥಾ ಟೈಮಿನ್ಯಾಗ ತಾಳಿ ಕಟ್ಟಿದ್ರೋ ಗಂಡನ ಮಾಡಿದ ತಕ್ಷಣ ಹಿರೇಬ್ಯಾನಿ ಬಂತಲ್ಲ ದೇವಿ ನೀನು ಊರಿಗೆ ಮಗಳಮ್ಮಾ ನಿನ್ನ ಹೆಂಗ ಉಪಾಸ ಕಳಸಲಿ ಊರಿಗೆ ಮಗಳನ್ನ ಅಮ್ಮಾ ಪರದೇಶಿ ಮಗಳಮ್ಮಾ

ತಾಯಿ–ತಂದೆ ಇಲ್ಲದವಳು ನಿನು. ನಿನಗೆ ಕುಂದ್ರೋಕೆ ಮನೆಯಿಲ್ಲ. ನಿದ್ರಲಿಕ್ಕೆ ಮರಗಳಿಲ್ಲ. ಗಿಡಗಳಿಲ್ಲ, ಗಂಡ ಇಲ್ಲಮ್ಮ ನಿನಗೆ ಆಶ್ರಯವಿಲ್ಲ ಅಂತೇಳಿ ಮುಚ್ಚಳದಾಗ ಮಜ್ಜಿಗೆ ಅನ್ನ ಕಲಿಸಿಕೊಟ್ಟು ಮ್ಯಾಳ್ಗಿ ಮೇಲಿದ್ದ ಕೆಲಗೆ ಇಟ್ಟು ಆಗ ದುಃಖ ಮಾಡುತ್ತಾ ಎಲ್ಲಮ್ಮ ಮ್ಯಾಕೆ ನೊಡಿದಳು. ಅಮ್ಮಾ ಊಟ ಮಾಡಿ ಹೋಗು ನಿಮ್ಮಣ್ಣಾರು ನೋಡಿದರೆ ಕಡದು ಹಾಕುತ್ತಾರೆ ಎಂದಾಗ ಹೆದರಿಕೆಯಿಂದ ಸಮುದ್ರಕ್ಕೆ ಮುಳುಗಿ ಸಾಯಿ ಹೋಗು ಅನ್ನುವಾಗ ಉಧೋ ಅಂತಾಳೆ ಎಲ್ಲಮ್ಮ ಗುಡ್ಡ ಇಳಿದಾಳೆ ದುಃಖ ಮಾಡ್ತಾಳೆ, ಶೋಕ ಮಾಡ್ತಾಳೆ ಲೋಕದಾಗೆ ನನ್ನ ನೋಡೋರು ಯಾರಿಲ್ಲ ಅಂತಾಳೆ. ಗಂಡ ಇದ್ದಲ್ಲಿಗೆ ಬಂದು ಗಿಡಕೆಳಗೆ ದುಃಖ ಮಾಡ್ತಾ ಜಗಪುಟ್ಟಿ ಮ್ಯಾಲೆ ಬಿದ್ದು ತಪಸ್ಸು ಕುಂತಳು. ಆಗ ತೆರೆಯಲಾರದ ಎಡಗಟ್ಟು ತೆರೆದ, ತೆರೆಯಲಾರದ ಒಣಗಣ್ಣು ತೆರೆದು ನೋಡ ಯಾವಳೇ ದುಃಖ ಮಾಡೋಳು ದೂರ ಇರು ಅಂದುಬಿಟ್ಟ, ಕರ್ಮಲೋಕ ದುಷ್ಟ ಲೋಕದಲ್ಲಿದ ನೀನು ದೂರ ಇರಲೇ ಎಂದಾಗ ಎಲ್ಲಮ್ಮನ ಪ್ರತಿ ಉತ್ತರ ಪ್ರತಿಭಟನೆಯೆಂತೆ ಮಾತುಗಳು ಇಲ್ಲಿವೆ.

"ಏನ್ರೀ
ನಿನ್ನ ಮೈ ತೊಳ್ದ ನೀರು
ನಾನು ಕುಡ್ದಿದ್ದಿಗೆ
ಹಿರೇಬ್ಯಾನಿ ಬಂತು
ನಿನ್ನ ರ್‍ವಾಗ ನನ್ಗೆ ಬಂತು
ನನ್ನ ನೋಡೋರು ಯಾರು
ಕೇಳವೇ ಈ ಲೋಕೆಲ್ಲ ತಿರುಗಿದ್ರು
ಹಿರೇಬ್ಯಾನಿ ಅವುಷಧಿಗೆ ಭೇಸ್ ಆಗದಿಲ್ಲ
ಅವುಷಧನೆ ಸಿಗದಿಲ್ಲ
ಮತ್ತೇ ಹ್ಯಾಂಗ ಮಾಡ್ಬೇಕ್ರಿ
ಆರು ಸಮುದ್ರಾಕಡಿಗೆ
ಯೇಳು ಸಮುದ್ರದಾಗ
ವಿಷ ಸಮುದ್ರ ಐತಿ
ಹಚ್ಚಗ ಅರಿಶಿಣ ಬಣ್ಣ ಇದ್ದಂಗ
ಆಗ ಇಷ ಸಮುದ್ರದಾಗ
ಉಧೋ ಅನ್ನಲೇ ನೀನು ಮುಣ್ಗೆ ಬಿಡಲೇ" ೫೬

ರೇಣುಕೆಯ ಹಿರೇಬ್ಯಾನಿ ರೋಗ ನಿವಾರಣೆ ಪರಿಹಾರವೆಂಬಂತೆ ಆ ವಿಷ ನೀರ ತಟ್ಟೋ ಹೊತ್ತಿಗೆ ಓರೇಬ್ಯಾನಿ ತೊಗಲಿಗೆ ಬಿಡುಲೇ ತೊಗಲು ಬಿಡತ್ತೈತಿ, ತೊಗಲು ಸುಲದು ನೆಲಕ್ಕೆ ಬೀಳತ್ತೈತಿ ಓರೇಬ್ಯಾನಿ ಜಳಜಳವಾತ್ತೈತಿ ನಿನ್ಗೆ ಬೆಳಗಾಗ ಹೊತ್ತಿಗೆ ಜ್ಯೋತಿ ಆದ್ದಂಗ ಆತಿಯೇ ಎಂದಾಗ ಎಕ್ಕೆ ಜಟ್ರೆ ಓರೇಬ್ಯಾನಿ ರೂಗ ಹೋತ್ತೈತಿ ನಿಜ ಆದರೆ ನೀರಿಗೆ ವಿಷ ಸೇರಿದರೆ ಹೆಂಗ ಮಾಡ್ಲಿ ಅದನ್ನ ಜಿಡಾಗ ನನಗೆ ಕಾಲಿಲ್ಲ ಕೈಯಿಲ್ಲ ಜಗಪುಟ್ಯಾಗ ಕುಂತು ಉಧೋ ಅಂತ ಸಮುದ್ರದ ಮೇಲೆ ಜಗಪುಟ್ಯಾಗಿಂದ ಸಮುದ್ರ ದಾಟಿ ಬಂದಾಳೆ. ಉಪ್ಪುಸಮುದ್ರಕ್ಕೆ ಬಂದಾಳೆ ಮಣಕಾಲಿಟ್ಟಾಳೆ. ಇಳಿದಾಳೆ

ಬುಟ್ಟ್ಯಾಗಿಂದ ಮೂರು ಸರತಿ ಮುಳುಗಿದಳು ಆಗ ವಿಷ ನೀರ ತಟ್ಟಿದ ಮೇಲೆ ತೊಗಲು ಸುಲಿದು ಕದ್ಗೆ ತೊಗಲು ಹೋಗಿ ಕೆಂಪಾಗಿ, ಬೆಳ್ಳಗೆ ಜ್ಯೋತಿ ಅದ್ಹಂಗ ಆಗಿಬಿಟ್ಟು, ಕೈ ಉಗುರು, ಕಾಲುಗುರು ಜಳ ಜಳ ಆದವು. ವಿಷ ನೀರಾಗ ಹಾಕಿ ಉಧೋ ಅಂತ ಮುತ್ತಿನ ಸೆರಗಲಿ ಗಂಗನ ಶರಣ ಮಾಡಿ ಮತ್ತೆ ಬದುರ ಮುಟ್ಟ್ಯಾಗ ಕುಂತು ಸಮುದ್ರದ ಈ ಕಡಿಗೆ ಬರುತಾಳೆ ದೇವಿ. ಸಮುದ್ರ ನೀರ ಕುಡಿವಾಕಿ, ಹುಲ್ಲು ತಿಂದಾಕಿ ಎಂಟು ದಿವಸ ಹುಡುಕ್ಯಾಡಿದ್ಲು ಎಲ್ಲೂ ಕಾಣಲಿಲ್ಲ ಅಲ್ಲೆ ಗಿಡದಾಗ ಇದ್ದಾನ ಕಾಣವಲ್ಲ ಪರಮಾತ್ಮ ನನ್ನ ಜೀವ ಒರದವ್ವೆ ಎಲ್ಲ್ಯದಿ ತಾಯಿ ಎಂದು ಪ್ರಾರ್ಥಿಸುತ್ತಾಳೆ. ಈ ರೀತಿ ಒರೆಟ್ಯಾಸಿ ವಾಸಿಯಾಗುವ ಪರಿಯು ಸಮುದ್ರದ ನೀರಿನಲ್ಲಿ ಮುಳುಗಿದ ನಂತರ ವಾಸಿಯಾಗುವುದು. ಕಾರಣ ಸಮುದ್ರದ ನೀರು ಲವಣಾಂಶದಿಂದ ಕೂಡಿದ್ದು ಅದು ಚರ್ಮ ರೋಗಗಳ ನಿವಾರಣೆಗೆ ಸಹಕರಿಸುವಂತಿರುವುದು ಕಾಣಬಹುದಾಗಿದೆ. ಈ ಕಥೆ ಮುಂದುವರೆದು ಎಲ್ಲಮ್ಮನ ಸತ್ವ ಪರೀಕ್ಷೆ ಮತ್ತು ಪರಶುರಾಮನ ಜನನದ ಕುರಿತಾಗಿ ಈ ರೀತಿಯಾಗಿ ಮೂಡಿಬಂದಿದೆ.

"ಹುಟ್ಟಿದ ಮಾರ್ಲೆ ನಮ್ಗೆ ಉಂಬಾಕಿಡ್ಬೇಕು ಊಟಕ್ಕ
ನೀನು ಉಟ್ಟಿದ ಸೀರೆಮ್ಮ ಬಿಚ್ಚಿ ಊಟಕ್ಕೆ ಇಡ್ಬೇಕು" ೫೭

ಆಗ ತಾಯಿ ಹೊಟ್ಯಾಗ ಹುಟ್ಟಿದಾಂಗ ನಮಗೆ ಉಂಬಾಕಿಡಬೇಕು ಹಂಗಾದ್ರೆ ಊಟ ಮಾಡ್ತೀವಿ ಇಲ್ಲದಿದ್ರೆ ಇಲ್ಲ ಈ ಶರತ್ತಿಗೆ ಒಪ್ಪಿದ ದೇವಿಯು ಮನೆಗೆ ಬಂದ ಅತಿಥಿಗಳು ದೇವರಿಗೆ ಸಮ ಎಂದು ತಿಳಿದು ಇಂಥಹ ಶರತ್ತುಗಳಿಗೆ ಒಪ್ಪಿಕೊಳ್ಳುತ್ತಾಳೆ. ಅನಾದಿಕಾಲದಿಂದಲೂ ಈ ತರಹದ ಅನೇಕ ಘಟನೆಗಳು ಪೌರಾಣಿಕ, ಐತಿಹಾಸಿಕ, ಕಥೆ, ಪುರಾಣ ಮೊದಲಾದವುಗಳಲ್ಲಿ ನಾವು ಕಾಣಬಹುದಾಗಿದೆ. ಎಲ್ಲಮ್ಮ ಹುಟ್ಟಿದ ಮಾರ್ಲೆ ಊಟಕ್ಕೆ ನೀಡುವಾಗ ಈ ತರಹದ ಕಾವ್ಯ ಸೃಷ್ಟಿಯಾಗಿದೆ.

"ಹುಟ್ಟಿದ ಮಾರ್ಲೆ ನೀಡ್ತಿನಿ ಬಾ
ಅಂತ ಎಲ್ಲಮ್ಮನ ಕೂದ್ಲು ನೋಡು
ಭೂದೇವ್ಸಿಗಿ ಬೀಳ್ತಾವಪ್ಪ ತಲಿಕೂದ್ಲು
ಕಟ್ಟಿದ ತುರ್ಬಿ ಬಿಟ್ಟಾಳ ದೇವಿ
ಉಧೋ ಅಂದಾಳ ತಲೆ ತಿರುವಿ ಬಿಟ್ಟಾಲ ದೇವಿ
ವಿ.. ಕೂದ್ಲು ನೋಡ ಸುತ್ತುವರಿದುಕ್ಯಂಡು
ಮೈ ತುಂಬನೇ ಸುತ್ತುವರಿಕ್ಯಂಡು
ಯಾಮ್ಮಾ ಸೀರೆ ಕುಬುಸಮ್ಮ ಉಚ್ಚಿನೆಲಕ್ಕೆ ಬಿದ್ದೈತೆ ದೇವಿ
ಥಕ ಥಕ ದಿಗತ್ಯೆ ತಾ" ೫೮

ಈ ರೀತಿಯ ಕಲ್ಪನೆಯು ವಚನ ಸಾಹಿತ್ಯದ ಆದ್ಯ ಮಹಿಳಾ ವಚನಕಾರ್ತಿ, ಕನ್ನಡ ಸಾಹಿತ್ಯದ ಮೊದಲ ಕವಯಿತ್ರಿ ಎಂದು ಕರೆಸಿಕೊಂಡಿರುವ ಅಕ್ಕಮಹಾದೇವಿ ವಿವಾಹವಾದ ನಂತರ ಕೌಶಿಕ ಶರತ್ತುಗಳ ಮೀರಿದಾಗ ಅಕ್ಕಮಹಾದೇವಿ ತನ್ನ ಗಂಡನೆಂದು ನಂಬಿದ್ದ ಚನ್ನಮಲ್ಲಿಕಾರ್ಜುನನ ಒಪ್ಪಿಕೊಂಡು ಅಂಕಿತವಾಗಿ ಸ್ವೀಕರಿಸಿ ಅವನಲ್ಲಿ ಧ್ಯಾನಾಸಕ್ತಳಾಗಿರುತ್ತಾಳೆ. ಆಗ ಅವಳು ಈ ದೇಹ ನಿರಾಕಾರ ಎಂದು

ಬಟ್ಟೆ ಕಳಚಿದಾಗ ಈ ತರಹದೇ ಕಲ್ಪನೆ ವಚನಗಳಲ್ಲಿ ಕಾಣಬಹುದಾಗಿದೆ. ಸೀರೆ ಕುಬುಸ ಉಚ್ಚಿ ನೆಲ್ಕ ಬಿತ್ತು ತಲೆ ತುಂಬ ಕೂದ್ಲು ಸುತ್ತುವರಕೊಂಡು ನಂತರ ಸೀರೆ, ಕುಬುಸ ತಗೆದಿಟ್ಟು ಉಂಬಾಕ ಇಡುವ ಎಲ್ಲಮ್ಮನ ಕಂಡು ಪಾರ್ವತಿ-ಪರಮೇಶ್ವರ ಹಾಗೂ ವಿಷ್ಣು ನಿಜ ಸತ್ಯ ಇದೆ. ಅವ ಸತ್ಯವಿಲ್ಲ ಅಂದು ನಮ್ಗ ಊಟ ಬೇಡ ನಿಜ ಸತ್ಯ ನೋಡಬೇಕಂತ ನೋಡಿವಿ ಎಂದು ನಿನ್ನ ಮುತ್ತೈದೆ ಹೋಗತೈತಿ, ಭಂಡಾರ  ಹೋಗತೈತಿ, ಬಳೆ ಹೋತೈತಿ ಅಂತ ಹೇಳಿದ್ದಕ್ಕೆ ಓಡಿ ಓಡಿ ಬರ್ತಾಳೆ ಗಂಡನ ಅಂತಿರ ಎಲ್ಲಮ್ಮ ಆಗ ತಣ್ಣೀರಲ್ಲಿ ಸ್ನಾನ ಮಾಡಿ ಗಂಡನ ಸುತ್ತ ಕುಂತಾಳೆ ದೇವಿ ಗಂಡನ ಮುಟ್ಟಬ್ಯಾಡ ಜಗ ಇಳಿಸುವಳು. ಜಗಪುಟ್ಟಿ ಇಳಿಸಿ ತನ್ನ ಗಂಡನ ಎರ್ಡ ಹನಿ ರಕ್ತ, ಎರ್ಡ ಹನಿ ಹಾಲು ಗಂಡನ ಜೀವುದ ಕಣ್ ಮುಚ್ಚಿಕೊಂಡು ಕುಡ್ದರೆ ಕೆಂಪಗ ರಕ್ತಗೆ ಕೆಂಪಗ ಭಂಡಾರ ಇರತೈತಿ ಹಣೆಮ್ಯಾಲೆ ಎಂದದ್ದಕ್ಕೆ ಎರಡು ಬೊಗಸೆ ಹಿಡ್ಕೊಂಡು ಗಂಡನ ಜೀವುದ ರಕ್ತ ಬಾಯಿಗೆ ಕಣ್ ಮುಚ್ಚಿಕಂಡು ಕುಡಿಯುವಾಗ ಪಾರ್ವತಿ ವಿಷ್ಣುವಿಗೆ ಹೇಳುತ್ತಾಳೆ. ವಿಷ್ಣು ನೀನು ಹುಟ್ಟಿ ಕಾರ್ತಿಕ ರಾಜನೋರ ಕೊಲ್ಬೇಕು ಎಂದಾಗ ಸರಿಯಂತ ಅಂದಾಗ

"ಆಗ ಬೊಗಸ್ಯಾಗನೆ ಕುಂತಾನ ಕ್ರಿಷ್ಣ
ಬಾಯಾಗಿದ್ದಮ್ಮ ಹೊಟ್ಯಾಗ ಬಿದ್ದೆ ಬಿಟ್ಟಾನ" [೫೯]

ಆಗ ಪಾರ್ವತಿ-ಪರಮೇಶ್ವರ ನಾವು ಕೊಟ್ಟ ಶಿಶುವು ನಮಗೆ ಶಾಪಕ ಕೊಡ್ತಾಳಂತ ಹೂವಿನ ತೋಟ್ದಾಗ ಕುಂತಾರೆ, ಜೈ ಅಂತ ಮೇಲಕ್ಕೆ ಹೋಗುತ್ತಾರೆ. ಆಗ ಎಲ್ಲಮ್ಮ ದುಷ್ಟ ನನ್ನ ರಕ್ತ ಹಾಲು ಕುಡಿದ್ಯಾ ಹಾಲು ಕುಡಿವಂತ ಮಗ ಹುಟ್ತಾನ. ರಕ್ತ ಕುಡಿವಂತ ಮಗ ಹುಟ್ತಾನ, ನನ್ನ ಹೆಸರೇಳಿದ್ರ ನನ್ನ ತಲೆ ಹೋಳಾಗ್ತದೆಯಂತೆ ಎಂದು ಯೋಚಿಸುತ್ತಾ, ಅಯ್ಯೋ ಸರ್ವ ತಪ್ಪಾಯ್ತು ನನ್ನ ಕಡೆಗೆ ನೋಡು ಅಂತ ಒಂದು, ಎರಡು... ಎಂಟು ದಿನ ದುಃಖ ಮಾಡಿದ್ರು ಕಣ್ಣ ಬಿಡದೆ ಹಾಗೆ ಇದ್ದ ಮಾರಷಿ. ಅಲ್ಲಿಗೆ ರಕ್ತ ನಿಂತು ಹಾಲು ನಿಂತುಹೋದವು. ಎಂಟು ದಿನದಾಗ ಗರ್ಭದಾಗಿನ ಮಗ ಹೀಗೆ ಹೇಳುತ್ತಾನೆ. ಅಮ್ಮ ಹಡಿವಾಗ ನಿನಗ ಕಷ್ಟ ಬರುತದ ನಡಿ ಹೋಗಾನ ಲೋಕದಾಗ ಎನ್ನುವನು. ಇದು ಮಹಾಭಾರತದಲ್ಲಿ ಅರ್ಜುನನ ಮಗ ಅಭಿಮನ್ಯು ಸಹ ದ್ರೌಪದಿಯ ಗರ್ಭದಾಗಿದ್ದಾಗ ಕೃಷ್ಣ ಹೇಳಿದ ಕಥೆಯ ಕೇಳಿ ಹೂಂ ಎನ್ನುವುದನ್ನು ನೆನಪಿಸುತ್ತದೆ. ಹಾಗೆ ಕಥೆಯು ಮುಂದುವರೆದು ಎಲ್ಲಿಗೆ ಹೋಗೋದು ಎಂದು ಯೋಚಿಸಿ ಎಲ್ಲಮ್ಮ ಯಾವುದಾನ ಒಂದು ಪಟ್ಟಣಕ್ಕೆ ಎಂದು ಜಗಪುಟ್ಟಿ ಹೊತ್ಕೊಂಡು ಗಂಡನ ಸುತ್ತ ತಿರಿಗಿದ್ಲು ಗರ್ಭವತಿ ಎಲ್ಲಮ್ಮ. ದೇವಿ ಬರುವಾಗ ಹೊಟ್ಯಾಗಿನ ಮಗು ಮಾತಾಡ್ತದೆ.

"ಯಮ್ಮ ಉಳ್ಳಾಗಡ್ಡಿ ತಿಂಬಾಂಗಾತು
ಶಾವಿ ಪಲ್ಯ ಮೆಂತೆ ಪಲ್ಯ ನನ್ಗೆ ಬೇಕು
ಹುಳ ಸಿಕ್ಕ ಪಲ್ಯ ಪನಕನ ಪಲ್ಯ
ಮಾಲಂಗಡ್ಡೆ ಆಲೂಗಡ್ಡೆ
ನಿಂಬೆಕಾಯಿ ಕೋಸಗಡ್ಡೆ
ಮೆಣಸಿನ ಕಾಯಿ ಬದನೆಕಾಯಿ ಎಲ್ಲ
ಯಪ್ಪಾ ಇಷ್ಟೊತ್ತು ಕೇಳ್ತಿಯಾ ನಾನು ಎಲ್ಲಿಂದ ತರಬೇಕು" [೬೦]

ಗರ್ಭದಾಗಿನ ಮಗು ಈ ಎಲ್ಲಾ ವಸ್ತುಗಳ ಬೇಡುತ್ತದೆ ಎಂಬ ಪೌರಾಣಿಕ ಕಥೆಯ ನಂಬಿಕೆಯು ಇಂದಿಗೂ ಸಹ ಸವದತ್ತಿ ಜಾತ್ರೆಯಲ್ಲಿ ಪೂಜೆಗೆ ಒಳಗಾಗಿರುವುದನ್ನು ನೋಡಬಹುದಾಗಿದೆ. ಸವದತ್ತಿ ಎಲ್ಲಮ್ಮನ ಜಾತ್ರೆಗೆ ಬರುವ ಪ್ರತಿಯೊಬ್ಬ ಭಕ್ತರು ಕಾಯಿ ಪಲ್ಯ ತಂದು ಜಗಪುಟ್ಯಾಗ ಇಟ್ಟು ಪೂಜಿಸಿ ಊಟ ಮಾಡುವ ಪದ್ಧತಿ ಇಂದಿಗೂ ಇದೆ. ಬಯಲು ಸೀಮೆಯ ಜನರ, ಕೃಷಿಕರು ಈ ವಸ್ತುಗಳಿಗೆ ಬೇಡಿಕೆ ಹೆಚ್ಚಿದ್ದು ಆಹಾರ ತಯಾರಿಕೆ ಮಳೆ ಆಶ್ರಿತ ಕುಟುಂಬದವರು ಈ ವಸ್ತುಗಳ ಮೇಲಿನ ಪ್ರೀತಿಯೂ ಆಹಾರ ವಸ್ತುಗಳೂ ಆಗಿರುವುದು ಈ ರೀತಿಯ ಪೂಜೆಗೆ ಕಾರಣವಾಗಿದೆ.

"ಗಂಡು ಹೋಗಿ ನಾನ್ಹೆಣ್ಣು ಮಾಡೇನು
ನಿಮ್ಮನ್ನ ಸೀರೆ ಉಡಿಸೇನು ನಾನು ಅಡ್ಡಲ್ಗಿ ಕೊಟ್ಟೇನು
ಏ.. ಯೇಳ ಮುಂದಿಯಲೇ ಯೇಳ ದೇಶಕ ಕಳಿಸೇನು" [೬೧]

ಆ ಏಳು ಮಂದಿ ಅಣ್ಣ ತಮ್ಮಂದಿರಿಗೆ ಶಾಪ ಹಾಕಿ ಉಧೋ ಅಂತ ಶಾಪ ಹಾಕಿ ಊರಿಗೆ ದೊಡ್ಡೋರು ಗೌಡ್ರು ಅಂತ ಮನೆಗೆ ಬಂದ್ಳು. ಸ್ವಾಮಾರ ದಿವ್ಸ ವ್ಯಾಪಾರ ಹಿರೇಕಾಯಿ, ಬೆಂಡೆಕಾಯಿ, ಕುಂಬ್ಳಕಾಯಿ, ಹುಳಪಕಿಪಲ್ಯ, ಪನಕಪಲ್ಯ ರಾಶೀ ಹಾಕ್ಯಂಡು ಅಲ್ಲಿಗೆ ಎಲ್ಲಮ್ಮ ಬಂದು ಉಧೋ ಅಂದಾಳ ಅವರು ದುಡಿಲಾರದೇ ಭಂಡಾರ ಹಚ್ಚಿಕೊಂಡು ಬಂದಿರ ಹಾಳಗಿ ಹೋತೀರ ಅಂತ ಗೌಡ್ರು ನಾಗಮ್ಮ ಅಂತಾಳ ಆಗ ಯಮ್ಮ ನಾವು ಹಾಳಾಗೋದಿಲ್ಲ, ನೀವು ಹಾಳಾಗಿ ಹೋತೀರ ಎಂದು ಜೋಗವ್ವ ಹೇಳುವುದು. ಇಂದಿಗೂ ಸಹ ಭಂಡ ಜೋಗಮ್ಮಗಳ ವರ್ತನೆ ಇದೇ ರೀತಿ ಕಂಡುಬರುವುದನ್ನು ನೋಡಬಹುದಾಗಿದೆ. ಅವರು ಬಂದರೆ ಏನಾರ ಕೊಡಲೇ ಬೇಕು. ನಾಚದೆ ಪೀಡಿಸಿ, ಕಾಡಿಸುತ್ತಾರೆ. ಈ ಪದ್ಧತಿಯು ಸಾಮಾಜಿಕ ಪ್ರಕ್ರಿಯೆಗಳಲ್ಲಿ ಒಂದು ಎನ್ನುವಂತಹ ಸ್ಥಿತಿ ಸೃಷ್ಟಿಯಾಗಿದೆ. ಗಂಡು ಜೋಗವ್ವ, ಬಸವಿ ಅಥವಾ ತ್ರಿಲಿಂಗಿಗಳೆಂದು ಹೆಸರು ಪಡೆದ ಇವರು ಪ್ರಸ್ತುತ ಸರಕಾರಿ ಸ್ವಾಮ್ಯತೆ ಪಡೆದಿದ್ದು ಅವರಿಗೆ ಯಾರೂ ನಿಂದಿಸುವಂತಿಲ್ಲ. ಅವರು ಸಾರ್ವಜನಿಕ ಸ್ಥಳಗಳು ಸಾರಿಗೆ-ಸಂಪರ್ಕದ ಸ್ಥಳಗಳು, ನಗರ ಪ್ರದೇಶಗಳು, ಸಂತೆಗಳು, ಜಾತ್ರೆ ಮಹೋತ್ಸವ ರೈಲುಗಳಲ್ಲಿ ಬರುತ್ತಾರೆ. ಅಲ್ಲಿ ಹೆಚ್ಚಾಗಿ ಪುರುಷರಿಗೆ ಕಾಡಿಸಿ ಹಣ ಕೇಳುತ್ತಾರೆ. ಕೊಡದಿದ್ದರೆ ಭಂಗಮಾಡಿ ಹಿಂಸೆ ಮಾಡುತ್ತಾರೆ. ಅಂತಹ ಸ್ಥಿತಿ ಸೃಷ್ಟಿಯಾಗಿದ್ದು ಪ್ರಸ್ತುತ ಸರ್ಕಾರಿ ಸೌಕರ್ಯ ಪಡೆದ ಇವರು ಮಾಸಿಕ ವೇತನ ಸಹ ಪಡೆದಿದ್ದು ತಮ್ಮ ಸಂಘ ಸಂಸ್ಥೆ ಸ್ಥಾಪಿಸಿಕೊಂಡಿದ್ದಾರೆ. ಆಧುನಿಕ ಸಂದರ್ಭದಲ್ಲಿ ಇವರುಗಳಿಗೆ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಉದಾರಹಣೆಗೆ ಮಂಗಳಮುಖಿಯರು, ತ್ರಿಲಿಂಗಿಗಳು, ಹಿಜ್ಡಾಗಳು, ಛಕ್ಕಾಗಳು, ಗಂಡು ಜೋಗಮ್ಮರು, ನಂ. ೯ ಮೊದಲಾದ ಅನೇಕ ಹೆಸರುಗಳಿಂದ ಇವರಿಗೆ ಕರೆಯುತ್ತಾರೆ. ಇವರ ವೃತ್ತಿಯೇ ಅದಾಗಿದ್ದು, ಉದ್ದೇಶಪೂರ್ವಕವಾಗಿ ಮತ್ತು ಜೈವಿಕ ಪ್ರಕ್ರಿಯೆಗಳ ಸಹಜ ಕ್ರಿಯೆಗಳ ಬದಲಾವಣೆಯಿಂದ ಈ ತರಹದ ವೃತ್ತಿ ಕೈಗೊಳ್ಳುತ್ತಾರೆ.

ಗೌಡರ ನಾಗಮ್ಮ ಜೋಗಮ್ಮನಿಗೆ ನೀವು ಊರ ಜೋಗಮ್ಮರು ಊರ ಊದಿಕ್ಕೊಂಡಾಂಗೆ ಊದಿಕೊಂಡಿರಾ ಹಾಳಾಗಿ ಹೋಗ್ತೀರಾ ಅಂತ ಹೇಳಿದ್ದಕ್ಕೆ ಯಮ್ಮಾನಗ್ಗೆ ಜ್ವಾಳ ಬ್ಯಾಡ ನಾನು ಗರ್ಭತಾಯಿ ಒಂದು ಬದನೆಕಾಯಿ, ಹಿರೇಕಾಯಿ, ನಿಂಬೆಕಾಯಿ, ಉಳ್ಳಾಗಡ್ಡಿ ಮೆಣಸಿನಕಾಯಿ ಕೊಡಿ ಸಾಕು ಎಂದು ಕೇಳಿದ್ದಕ್ಕೆ ಇವತ್ತು ಸೋಮವಾರ ಕೊಡಾಕಿಲ್ಲ ನಾಳೆ ಬಾರವ್ವ ಕೊಡ್ತೀನಿ ಅಂದಿದ್ದಕ್ಕೆ

ಸ್ವಾಮಾರೇ ಉಡಿಯಕ್ಕಿ ಹಾಕಬೇಕು ನಾನು ಊರ ಮಗಳು ಎಂದಿದಕ್ಕೆ ಗೌಡ್ರ ನಾಗಮ್ಮ ಬೈಯುತ್ತಾ ಮಂಡ ಬಾರ್ಗಿ ತಗೊಂಡು ಹೊಡಿತಿನಿ ಅಂತ ಎಲ್ಲಮ್ಮ ಕಸಬರ್ಗಿ ತಗೋತೀಯ ಕಸಬಳಿಯೋರಿಲ್ದಾಂಗ ಮಾಡೇನು ಮನೆಯಾಗ ಅಂತ ಭಂಡಾರ ಉಗ್ಗಿ ಉಧೋ ಅಂತ ಎಲ್ಲಿಗೆ ಹೋಗೋದು ಅಂತ ಅನ್ನುವಾಗ ಹೊಟ್ಯಾಗಿನ ಮಗ ಯಮ್ಮಾ ಸುಡುಗಾಡದಾಗ ಬೇನಗಿಡ ಅಲ್ಲಿಗೆ ಹೋಗಾನ ಅವ್ರಿಗೆ ಸುಡುಗಾಡಿಗೆ ಎಳೆಯೋಣ ಅಂತ್ಹೇಳಿ ಸುತ್ತ ತಿರುಗಿ ಜಗಪುಟ್ಟಿ ಇಟ್ಟು ಕುಂತಕಂಡ್ರು ಆಗ ಬದನೆಕಾಯಿ ಬರೆ ತಪ್ಪಲು, ಹುಣಚಿಕನ ಪಲ್ಯ ಬರೇ ಹುಳಿಕು ಮೂಲಂಗಿ ಕೇಳತಾವ ಅದನ್ನ ಹಡುಗರು ನೋಡಿ ನಾವು ಬರ್ತಿವಿ ಅಂತೇಳಿ ಉಧೋ ಉಧೋ ಅಂತ ಥೈ ಥೈ... ಕುಣಿತಾ ಹೊರಟರು. ಹಿರೇಕಾಯಿಲ್ಲ, ಬೆಂಡೆಕಾಯಿಲ್ಲ, ಕುಂಬಳಕಾಯಿಲ್ಲ ಮಕ್ಕಳು ಸೀರೆ ಉಟ್ಕೊಂಡು ಕುಣಿತಾವೆ. ಲಿಂಗನಗೌಡ ನೋಡಿ ಎಲ್ಲಾ ಹಾಳಾಗಿ ಹೋಯಿತಂತ ಯೆಬ್ಸ್ಯಾಳ ನಮ್ಮ ಮಕ್ಕಳಿಗೆ ಅವಳು ಎಲ್ಲಿ ಹೋಗ್ಯಾಳ ಊರಾಗ ಹುಡುಕರಿ ಯಾಮನೇಯಾಗೆ ಇದಾಳೆ ವೂಳ್ಗಿ ಏರಿ ನೋಡಿದ್ರೆ ಸುಡುಗಾಡಾಗ ಬೇನ ಗಿಡ ಕೆಳ್ಗ ಕುಂತಾಳೆ ಅಮ್ಮಾ ಬೇನ ಗಿಡ ಕೆಳ ಸುಡುಗಾಡಾಗ ಕುಂತಾಳ ಓಡಿ ಬಂದ್ರು ಯವ್ವಾ ಊರಿಗೆ ದೊಡ್ಡಾಕಿ ನಾಗಮ್ಮ ಊರಿಗೆ ದೊಡ್ಡವರು ಲಿಂಗನಗೌಡರು ಕರಿತಾರೆ ಬಾರವ್ವ ಸ್ವಾಮಾರ ಹೊತ್ಮುಣಬಗತ್ತೈತೆ ಮೂರು ಗಂಟೆಯ್ಯೆತಿ ಗಂಡ ಮನಿಗೆ ಕಳಿಸಬೇಕು. ನಿನ್ಗೆ ಅಂತ ಕರಿಯುವಾಗ ಯಲ್ಲಮ್ಮ ಹೀಗೆ ಹೇಳುತ್ತಾಳೆ.

"ಮೂರು ಗಂಟೆದಾಗ ಉಡಕ್ಕಿ ಹಾಕಟ್ಟಿ ಬಾರವ್ವ
ಯಪ್ಪಾ ಬಾರ್ಗಿ ಬಡಿಯಂತ ಮನಿಗೆ ಯಾಕ ಬರ್ಲೆಪ್ಪ
ಬಾರ್ಗಿ ಇಟ್ಟಿದವ್ರ ಬಳಿಯವ್ರಿಲ್ದಂಗೆ ಹೋಗಲಿ" [೨]

ಯಲ್ಲಮ್ಮಗೆ ಬಾರ್ಗಿ ತಗೊಂಡು ಹೊಡೆಯಲು ಹೋಗಿದ್ದಕ್ಕೆ ಅವರಿಗೆ ಶಾಪ ಹಾಕುವ ಪರಿಯು ಅದರಂತೆಯೇ ಲಿಂಗನಗೌಡ್ರು ಗೌಡ್ರ ನಾಗಮ್ಮಗೆ ಕಷ್ಟಗಳು ಬಂದಿದ್ದು ಅವರಿಗೆ ತಮ್ಮ ತಪ್ಪಿನ ಅರಿವಾಗುತ್ತದೆ. ನಾವು ನಿನ್ನ ತಪ್ಪಾಗಿ ತಿಳಿದಿದ್ದವಿ ಆದರೆ ನೀನು ಸಾಮಾನ್ಯ ವ್ಯಕ್ತಿಯಲ್ಲ ನಿನ್ನ ಭಂಗಮಾಡಿ ಸರ್ವತಪ್ಪಾಗೈತಿ ಅಂತ ಕ್ಷಮೆ ಕೋರುತ್ತಾರೆ. ಇದು ದೇವ-ಮಾನವರ ಕಲ್ಪನೆಯು ಎಂತಹ ಮಹತ್ವ ಪಡೆದಿದೆ ಎಂಬುದನ್ನು ತಿಳಿಯಬಹುದಾಗಿದೆ. ಸಾಮಾನ್ಯ ಮಹಿಳೆ ಸರ್ವ ಸಮರ್ಪಣಾಭಾವದಿಂದ ಒಮದು ಒಳ್ಳೆಯ ಚಿತ್ತಸ್ಥಿತಿಯು ಎಂತಹ ಕಠೋರ ಸನ್ನಿವೇಶಗಳು ಬಂದರೂ ಸಹ ಅವುಗಳಿಗೆ ಮೆಟ್ಟಿ ನಿಲ್ಲಿಸುವ ಹಾಗೆ ಮಾಡುವ ಗುಣಗಳ ಬೆಳೆಸುವ ಪರಿಯು ದೇವತಾ ಸ್ಥಿತಿಯನ್ನು ಸೃಷ್ಟಿಸುತ್ತೆ. ಎಲ್ಲಮ್ಮ ಜೋಗತಿ ಅಂದ ಹಾಗೆಯೇ ಲಿಂಗನಗೌಡ ಮತ್ತು ಗೌಡರ ನಾಗಮ್ಮರ ಸ್ಥಿತಿಯು ಜೋಗತಿ ಬಗ್ಗೆ ಗೌರವ ದೇವತಾ ಭಾವ ಹುಟ್ಟಿಗೆ ಕಾರಣವಾಗಿ ಕ್ಷಮೆಯಾಚಿಸುವಿಕೆ ಪ್ರಸ್ತುತ ಮುಗ್ಧ ಜನತೆ ಇಂತಹ ಅನೇಕ ಪವಾಡ ಪುಣ್ಯ ಕಥೆಗಳಲ್ಲಿ ನಂಬಿಕೆ ಇಟ್ಟಿರುವುದನ್ನು ತಿಳಿಯಬುದಾಗಿದೆ.

ಮತ್ತೆ ಜೋಗತಿ ಎಲ್ಲಮ್ಮ ಸೀರೆ ಉಡೋದು, ನಾನು ಹುಟ್ಟಿದ ಹೊಳಿ ದಂಡೇಲಿ ಸ್ನಾನ ಮಾಡಿ, ಉಡಿಯಕ್ಕಿ ಹಾಕಿಕೊಂಬೋರು ಎಂದಾಗ ಜ್ವಾಳ ಕುಟ್ಟಿದ್ರು, ಮ್ಯಾಳ ತಾಳಕೂಟ ಜಗ ಹೊತ್ಕೊಂಡು ಸುಡುಗಾಡು ಹೆಣ ಹೊತ್ಕೊಂಡು ಬಂದ ಬಿದಿರು ಕಟ್ಟಿಗೆ ತಗಂಡು ಉಗುರಾಗ ಸೀಳಿ ಏಲ ಅಡ್ಡಲ್ಗಿ ಮಾಡಿ, ಜೇನ ಗೆರೆ ಬಳೆ ಮಾಡಿ ಅರಿಶೀಣ ಬಳೆ ಏಳ ಮಂದಿಗೆ ಹಾಲದ ಕಡಗ ಮಾಡಿ, ಏಳು ಸೀರೆ, ಏಳು ಮುತ್ತು ಜಗಪುಟ್ಯಾಗ ಇಟ್ಕಂಡು ಹರಳಯ್ಯನ ಕರೆದು ಹೊಸ ಮೂಗುತಿ ತಂದು ಏಳು ಮಂದಿಗೆ

ಏನ ಮಾಡಿದ್ಳು ಅಂದರೆ ಜೋಗತಿಯರ ಮಾಡಿದಳು. ಇದು ಜನಪದರ ಅಥವಾ ಮೂಲ ಸಂಸ್ಕೃತಿಯ ಜನಪರ ನಂಬಿಕೆ ಸಂಪ್ರದಾಯ ಅತಿ ಹೆಚಾಗಿದ್ದು ಇಂದು ಕಾಯ್ದೆ ಕಾನೂನುಗಳ ಪ್ರಭಾವದಿಂದಾಗಿ ಸ್ವಲ್ಪ ಕ್ಷೀಣಿಸಿವೆ ಎಂದೇ ಹೇಳಬಹುದಾಗಿದೆ. ಏಳು ಜನರನ್ನು ಮಡಿಮ್ಯಾಲೆ ಕರೆದು ಸ್ನಾನ ಮಾಡಿಸಿ, ಸೀರೆ ಉಡ್ಸಿ, ಉಡಕ್ಕಿ ಹಾಕಿ ಕುಬಸ ತೊಡಿಸಿ ಬಳೆ ತೊಡಿಸಿ ಪೂಜೆ ಮಾಡುವಾಗ ಲಿಂಗನ ಗೌಡರು ಈ ರೀತಿ ಕೇಳುತ್ತಾರೆ.

"ಏನಮ್ಮ ನಮ್ಮ ಮಕ್ಕಳಿಗೆ
ಹೆಣ್ಣು ಮಾಡ್ತಿದ್ದಿ
ಗಂಡು ಹೋಗಿ ಹೆಣ್ಣು ಮಾಡ್ತಿದ್ದಿ
ಯಮ್ಮಾ ಈಗ ಹಡಿಲಾರವ್ರು ಗೊಡ್ಡವ್ರು
ಈಗ ಹುಡ್ಯೋರನ್ನ
ಈಗ ಬಾರ್ಗಿ ತಕ್ಕೊಂಡವ್ಳ" ೬೩

ಕೊಟ್ಟ ಶಾಪದಂತೆ ಲಿಂಗನಗೌಡರ ಮನೆ ಮಕ್ಕಳ ಹೆಣ್ಣು ಹೋಗಿ ಗಂಡು ಮಾಡಿದ್ಳು, ಮನೆಯಾಗ ಬಾರ್ಗಿ ಹಿಡಿದು ಕಸ ಬಳಿಯಾರು ಇಲ್ದಂಗ ಮಾಡ್ಬೇಕು. ಹುಟ್ಟಿದ ಮಕ್ಕಳು ಹುಟ್ಟಿದ್ಹಂಗ ಇರಬೇಕು. ಅಂತೇಳಿ ಸಂತಾನ ಭಾಗ್ಯ ಇರಬಾರ್ದು ಅಂತ ಶಾಪ ಹಾಕಿದ್ದನ್ನು ನಿಜ ಮಾಡಬೇಕಂತ ಹೊರಟವಳೆ ದೇವಿ ಇದು ಪ್ರಸ್ತುತ ಸಮಾಜದಲ್ಲಿ ಜೋಗತಿ ಪದ್ಧತಿ ಅನುಸರಿಸುವ ವ್ಯಕ್ತಿಗಳು ಸಹ ಇದೇ ರೀತಿಯ ಬೆದರಿಕೆಯ ನುಡಿಗಳ ಹಾಡಿ ಜನರಲ್ಲಿ ಭಯ ಹುಟ್ಟಿಸುತ್ತಾರೆ. ಇದಕ್ಕೆ ಹೆದರಿದ ಜನರು ಭಕ್ತಿ ಭಾವದಿಂದ ದೈವದ ಕಲ್ಪನೆ ತಾಳಿ ಶರಣಾಗಿ ಪೂಜಿಸುತ್ತಾರೆ. ಈ ಕಾವ್ಯದಲ್ಲಿಯೂ ಸಹ ಏಳು ಮಂದಿ ಮಕ್ಕಳಿಗೆ ಸೀರೆ ಉಡಿಸಿ ಅಡ್ಡಲ್ಗಿ ಕೊಟ್ಟು ಉಡಿಯಕ್ಕಿ ಹಾಕಿ ಅದರಾಗೆ ಊಟ ಮಾಡಬೇಕು ಎನ್ನುವಳು. ಆಗ ಊರಿನ ಗೌಡ್ರು ಊರಿಗೆ ಮಗಳಮ್ಮ ಬಾ ತಾಯಿ ಮನಿಗೆ ಹೋಗಾನ ಅಂತ ಕರಕಂಡು ಬಂದ್ರು ಅಡಿಗೆ ಮಾಡಿ ಎಡೆ ಹಾಕಿ ಊಟ ಮಾಡಮ್ಮ ಅಂದ್ರು ಉಧೋ ಅಂತ ಒಂದು ತುತ್ತು ತೊಕ್ಕೊಳ್ಳುವಾಗ ಗರ್ಭದಾಗಿನ ಮಗು ನನಗೆ ಎರಡು ತುತ್ತು ನನ್ದು ಮೂರೇ ತುತ್ತು ನಿಂದು ಅಂತ ಎರಡೇ ತುತ್ತು ಉಡಾನೆ ನಂತರ

"ಹೊಳ್ಳಿ ಕುತ್ಕಂಡ
ಮೂರೇ ತುತ್ತು ಉಟಾ ಮಾಡಿದ್ಳು
ಐದು ತುತ್ತಿಗೆ ಎದ್ದು ಬಿಟ್ಳು ಎಲ್ಲಮ್ಮ
ಆಗ ತುಂಬಿದ ಎಲೆ
ತುಂಬಿದ ಅಡಿಕೆ ಕೊಟ್ರು
ಹಾರ್ಕ್ಯಂಡ್ಳು" ೬೪

ಐದೇ ತುತ್ತು ತಿಂದ ಎಲ್ಲಮ್ಮಗೆ ಬ್ಯಾನಿ ಹತ್ಯೆತೆ ಗರ್ಭದಾಗಿನ ಮಗ ತಾಳಲಾರದೆ ಬ್ಯಾನೆ ಬಂದ್ಯೆತೆ. ಆಗ ಎಲ್ಲಮ್ಮ ಗೌಡ್ರ ಮನೆಯಾಗ ಕಂಬ ಹಿಡಿದು ಗೋಳಾಟ ಏಳು ಗುಡ್ಡದಾಗ ಕಾರ್ತಿಕ

ರಾಜನಿಗೆ ಕೇಳಿ ಮಾಳಿಗೆ ಹತಿ ನೋಡಿದ ಓರಗಲ್ಲಾಗ ಗೌಡ್ರ ಮನ್ಯಾಗ ಎಲ್ಲಮ್ಮನ ಕಂಡು ಎಲ್ಲಮ್ಮಗೆ ಹೆಣ್ಣೆ ಹುಟ್ಟೈತ್ತೋ ಗಂಡೇ ಹುಟ್ಟತ್ತೈತೆ ಗೊತ್ತಿಲ್ಲ ನಾವು ಅವಳ ಗಂಡಗೆ ರಕ್ತ ಬರುವಂಗೆ ತುಳಿದು ಬಂದಿವಿ. ಹೆಣ್ಣು-ಗಂಡು ಏನೇ ಹುಟ್ಟಿದರೂ ಅದರ ಜೀವ ತೆಗೆದು ಬಾ ಎಂದು ಕಾರ್ತಿಕ ರಾಜನೋರು ಸೂಲಗಿತ್ತಿಗೆ ಹೇಳುತ್ತಾನೆ. ಇದು ಸಹ ಕೃಷ್ಣನ ಕಥೆ ಹೋಲುತ್ತದೆ. ಕೃಷ್ಣ ಜನ್ಮವೃತ್ತಾಂತ ತಿಳಿಯುವಾಗ ಕೃಷ್ಣನಿಂದ ತನ್ನ ಸಾವು ಎಂಬ ಮಾಹಿತಿ ಕೇಳಿ ಕೃಷ್ಣನ ಮಾವ ಕೃಷ್ಣ ಜನಿಸುವ ದಿನವೇ ಕೊಲೆ ಮಾಡಿಸುತ್ತಾನೆ. ಕೃಷ್ಣನಿಗೆ ಮೊದಲು ಜನಿಸಿದ ಎಲ್ಲಾ ಮಕ್ಕಳು ಸತ್ತು ಹೋಗಿರುತ್ತಾರೆ. ಆದರೆ ಸೂಲಗಿತ್ತಿಯು ಕೃಷ್ಣನ ಬದಲಿಗೆ ಬೇರೆ ಮಗುವನ್ನು ತಂದು ಕೃಷ್ಣನ ರಕ್ಷಿಸುತ್ತಾಳೆ. ಅಲ್ಲಿ ಹೆಣ್ಣು ಮಗುವನ್ನು ಸಾಯಿಸಲು ಮೇಲೆ ತೂರಿ ಕತ್ತಿ ಬೀಸುವಾಗ ಆ ಮಗು ಆಕಾಶಗುಂಟ ಹೋಗುತ್ತದೆ. ಈ ತರಹದ ಜನಪದ ಕಥೆಗಳು ಅನೇಕ ಇದ್ದು ಅವುಗಳನ್ನು ಹೇಳುವ ದಾಟಿ, ಸಮಯ ಸಂದರ್ಭಕ್ಕೆ ತಕ್ಕಂತೆ ಸ್ವಲ್ಪ ಸ್ವಲ್ಪ ಬದಲಾವಣೆ ಕಾಣಬಹುದಾಗಿದೆ. ಹೇಳುವ ಕಥೆ ಬೇರೆಯಾದರೂ ಸಹ ಘಟನೆಗಳು ಒಂದೇ ರೀತಿಯಾಗಿರುವುದನ್ನು ಗಮನಿಸಬಹುದಾಗಿದೆ.

ಸೂಲಗಿತ್ತಿಗೆ ಸೇರ ಬೆಳ್ಳಿ ಕೊಡುವುದಾಗಿ ಹೇಳಿ ಕಾರ್ತಿಕರಾಜ ಮಗುವ ಕೊಲ್ಲಲು ಹೇಳುತ್ತಾನೆ. ಆಕೆ ಪುರುಷರ ವೇಶ ಹಾಕಿಕೊಂಡು ಯವ್ವ ಗೌಡಸಾನಿ ಎಲ್ಲಿದಿಯೇ ನಾನು ಕೊರಚರವಳು ಇದಿನಿ ಎಲ್ಲಿದಿಯ. ಸಾಯೋದು ಉಳಿಯೋದು ಎಲ್ಲಾ ಹೇಳ್ತೇನಿ ಯಮ್ಮಾ ಪೀಡಾ ಪಿಸಾಸಿ ಹೇಳತೀನಿ ಅಂದಾಗ ಗೌಡರ ನಾಗಮ್ಮ ಓಡಿ ಬಂದು ಸೂಲಗಿತ್ತಿ ಸುಬ್ಬಕ್ಕಗ ಕೇಳುವಳು. ನೀನು ಯಾರು ಯಾವೂರು ಏನ ಮಾಡತೀಯ ಅಂತೆಲ್ಲ ಕೇಳಿದಾಗ ವಿಚಾರ ಎಲ್ಲಾ ಹೇಳುತ್ತಾಳೆ. ಸೂಲಗಿತ್ತಿ ಸುಬ್ಬಕ್ಕಗಿ ಎಲ್ಲಮ್ಮಗೆ ಬಾಣತನ ಮಾಡಲು ತಿಳಿಸುತ್ತಾರೆ. ಎಲ್ಲಾರನ್ನು ಕಳಿಸಿ ಸುಬ್ಬಕ್ಕ ಕೋಣೆಯಲ್ಲಿ ಒಬ್ಬಳೆ ಹೋಗುವುದಾಗಿ ಹೇಳುತ್ತಾಳೆ. ಬಾಕಲು ಮುಚ್ಚಿ ಬಿಟ್ಟು ತಾಳಿ ಪುಟ್ಟಿಗೆ ಇಟ್ಟು ಕತ್ತರಿ ಕುಡುಗೋಲು ತಗಂಡು ಎಲ್ಲಮ್ಮಗೆ ಹೆಣ್ಣೆ ಹುಟ್ಲಿ ಗಂಡೇ ಹುಟ್ಲಿ ನೀನು ಕಣ್ಣು ಬಿಟ್ಟು ನೊಡಬಾರ್ದು ಅಂತೇಳಿ, ನೋಡಿದರೆ ನಿನ್ನ ಕಣ್ಣು ಹೋಗತಾವ ಎಡಕ ಬಲಕ ಅಡ್ಡ ಬಿದ್ರೆ ಹಡ್ಯಂಗಿಲ್ಲ ಸತೋತಿ ಅಂತ ಎರಡು ಕೈ ಕಟ್ಟಿ, ಕತ್ತರಿ ಕುಡುಗೋಲು ಕೆಳಗಿಟ್ಟು ಕಬ್ಬಿಣ ಉಗುರುಗಳೂ ಕೈಗಿ ಇಟ್ಟುಕೊಂಡಳು. ಈ ಪದ್ಧತಿಯು ಪ್ರಾಚೀನ ಕಾಲದಿಂದಲೂ ಇದ್ದು ಸೂಲಗಿತ್ತಿಯರು ಹೆರಿಗೆ ಮಾಡುವ ಕಾಯಕ ಮಾಡುತ್ತಾ ಬಂದಿದ್ದಾರೆ. ಅವರು ಯಾವ ಡಾಕ್ಟರು ಮಾಡದಂತಹ ಸಾಹಸಮಯ ಹೆರಿಗೆ ಮಾಡಿಸುತ್ತಾರೆ. ಅವರ ಅನುಭವ ಅಪಾರವಾದುದು. ಈಗಲೂ ಹಳ್ಳಿಗಳಲ್ಲಿ ಹೆರಿಗೆ ಮಾಡಿಸುವ ಸೂಲಗಿತ್ತಿಯರು ಕಂಡು ಬರುತ್ತಾರೆ. ಅವರಿಗೆ ಸರ್ಕಾರದ ಸಹಕಾರವೂ ಇದೆ. ಕೆಲವೊಂದು ಸಂದರ್ಭದಲ್ಲಿ ಸೂಲಗಿತ್ತಿಯರು ತಮ್ಮ ನಿಯತ್ತಿನ ಕಾಯಕಕ್ಕೆ ಯಾವುದೇ ಮೊಸ ಮಾಡದೇ ನಿಷ್ಠೆಯನ್ನು ಮೆರೆದಿರುವ ನಿದರ್ಶನಗಳಿವೆ.

ಸೂಲಗಿತ್ತಿ ಸುಬ್ಬಕ್ಕ ಹೆರಿಗೆ ಮಾಡಿಸಲು ಸಿದ್ಧವಾದ ತಕ್ಷಣ ಹೊಟ್ಯಾಗಿನ ಮಗ ನೋಡಿ ಹೀಗೆ ಹೇಳುತ್ತಾನೆ.

"ಯಮ್ಮ ಕಣ್ಣಿಲಿ ಆಗ ನೋಡಿ ಬಿಟ್ಟ
ಯಮ್ಮಾ ನಾನೂ ಹ್ಯಾಂಗ ಬರಲೆ
ಯಮ್ಮಾ ಕತ್ತರಿ ಕುಡುಗೋಲು ನನ್ಗೆ ಇಟ್ಟಾರೆ

ಯಮ್ಮಾ ಬಾಯಾಗ ಬಂದರೆ ನಮ್ಮ ತಾಯಿ ಉಳ್ಯೋದಿಲ್ಲ
ಕಿವಿಯಾಗ ಬಂದರೆ ನಮ್ಮ ತಾಯೇ ಉಳ್ಯೋದಿಲ್ಲ" [೬೫]

ಈ ರೀತಿ ಚಿಂತಿಸಿದ ಆ ಮಗು ತನ್ನ ತಾಯಿಯ ಉಳಿಸಲು ಚಿಂತಿಸುತ್ತಾ ತಲೆ ಹಿಂದೆ ತಿರುವಿ ಕಾಲು ಮುಂದೆ ಚಾಚಿದ ಸೂಲಗಿತ್ತಿ ಸುಬ್ಬಕ್ಕ ಬಗ್ಗಿ ನೋಡಿದ್ಲು ಹಾಗ ಎರಡೂ ಕಾಲಿಂದ ಜಾಡ್ಸಿ ಒದ್ದಾನೆ ಎರಡು ಕಣ್ಣು ಒಡದಾವೆ ಕೋಳಿ ತತ್ತಿ ಒಡದ್ಹಾಂಗ ರಕ್ತ ಬಿದ್ದಾತೆ ಆಗ ಸೂಲಗಿತ್ತಿ ಸುಬ್ಬಕ್ಕ ರಕ್ತಕ್ಕೆ ಹುಟ್ಟಿದಾನೆ ಇವನು ಅಂದಳು. ಆಗ ಕಾಲು ಹಿಂದೆ ತಿರುವಿ ತಲೆ ಮುಂದೆ ತಿರುವಿದೆ. ತನ್ನ ತಾಯಿಗೆ ಧೈರ್ಯ ಹೇಳುತ್ತಾ ಹೀಗೆ ಜನಿಸುತ್ತಾನೆ.

"ಯಮ್ಮಾ ಹೆದರುಬ್ಯಾಡ ಲೋಕ ಹುಟ್ಟುತಿನಿ
ಬೆದರುಬ್ಯಾಡ ನಾ ಲೋಕ ಹುಟ್ಟುತಿನಿ
ಏ.. ಕುಪ್ಪಳ್ಳಿಯಮ್ಮ ಮಗ ಎಗರೆ ಬಿಟ್ಟಾನ
ಕೆಳಗ ಹಾರಿ ಬಿಟ್ಟ" [೬೬]

ಮಗ ಹೀಗೆ ಜನಿಸಿದ. ಜನಿಸಿದ ತಕ್ಷಣ ಸೂಲಗಿತ್ತಿ ಸುಬ್ಬಕ್ಕ ಕಣ್ಣ ಕಳಕಂಡು, ಕತ್ತರಿ, ಕುಡಗೋಲು, ಕೈಯ ಉಗರಗೋಳ ಪುಟ್ಟ್ಯಾಗ ಇಟ್ಟು ಬಟ್ಟೆ ಮುಚ್ಚಿದಳು. ಎಲ್ಲಮ್ಮನ ಕೈ ಬಿಚ್ಚಿದಳು. ಹೆಣ್ಣು ಗಂಡು ಅಂತ ಕೇಳಲು ಗಂಡು ಮಗ ಅವ್ವಾ ನನ್ಗೆ ಹೊಟ್ಟ್ಯಾಗಿಂದ ಒದ್ದ ಬ್ಯಾನಿ ಬರಗೆ ಒದ್ದಾನೆ. ಅವನ ಜನನದಿಂದ ಆಶ್ಚರ್ಯದಿಂದ ಸೂಲಗಿತ್ತಿ ಸುಬ್ಬಕ್ಕ ಪುಟ್ಟ್ಯಾಗಳ ಕಬ್ಬಿಣ ಉಗುರುಕೂಟ ಗೋಣ ತಿರುವಾಣಂತ ಯೋಚಿಸಿದ್ದನ್ನ ನೋಡಿದ ಎರ್ಡು ಕಾಲಿನಿಂದ ಜಾಡ್ಸಿ ಒದ್ದಾನೆ. ಬೊಕ್ಕಂತ ರಕ್ತ ಹರವೆ ಬಿಟ್ಯಾಳ ಹಿಂದಕ್ಕೆ ಬಿದ್ದು ಹುಡುಗ ಮುಂದಕ ಬಿದ್ದ ಕ್ಯಾಂವ್ ಕ್ಯಾಂವ್ ಅಂತಾನಾ. ಆಗ ಗೌಡ್ರು ನಾಗಮ್ಮ ಬಂದು ಸೂಲಗಿತ್ತಿ ಸುಬ್ಬಕ್ಕನ ನೋಡಿ ನಿನಗೇನ್ ಬಂತೆ ಅಂತ ಹುಡಗನ್ನ ಕೆಳಗೆ ಬಿಸಾಕಿಯ ಅಂತ ಕೇಳಿದಾಗ ಸೂಲಗಿತ್ತಿ ಸುಬ್ಬಕ್ಕ ಹೀಗೆ ಹೇಳುತ್ತಾಳೆ.

"ಆಯ್ತಮ್ಮ ನನ್ನ ಜೀವ ಉಳಿಯಂಗಿಲ್ಲ
ರಕ್ತಕುಟ್ಟಿದವ್ನು ರಕ್ತಳಿತಾನ
ಯಮ್ಮಾ ಗುಡ್ಡ ಸೇರ್ಸರೆ ಜಮ್ಮಿಗಿರಿ ಪಟ್ಲಮ್ಮ
ನನ್ನ ನೋಡ್ತಾರಾ ನನ್ನ ಅಣ್ಣಾ ಅಳಿಯಮ್ಮ" [೬೭]

ನಿಂಗನಗೌಡ ಬಂಡಿಯ ಮೇಲೆ ಹಾಕ್ಕೊಂಡು ಬಂದ್ರು ಕಾತಿಕ ರಾಜನ ಹತ್ತಿರ ಬಂದರು. ಕಾತಿಕ ರಾಜನೋರು ನಮ್ಮಕ್ಕನ ನೀವು ಕೊಲ್ಲಿದಿರ ಅಂತ ಕೇಳಿದಾಗ ಇಲ್ಲಪ್ಪ ನಾವಲ್ಲ ಸುಬ್ಬಕ್ಕನ ಕೇಳು ಅಂದಾಗ ಸುಬ್ಬಕ್ಕ ಹೀಗೆ ಹೇಳುತ್ತಾಳೆ. ರಕ್ತಕ್ಕೆ ಹುಟ್ಟಿದವ್ನು ರಕ್ತ ಬೀಳ್ಬಂಗ ಒದ್ದಬಿಟ್ಟ ಎರ್ಡು ಕಣ್ಣು ಕಳ್ಚಿ, ಎದ್ದ್ಯಾಗ ರಕ್ತ ಬೀಳ್ಬಂಗ ಒದ್ದ ಅಯ್ತಪ್ಪ ರಾಮನ ಬ್ರಹ್ಮ ನನ್ನ ಮದ್ವಿ ಆಗಿ ಹೊಯ್ತು. ನಾವು ಎದುರು ಹೋಗ್ಬಾಂಗೆ ಇಲ್ಲ ಹಾಗೂ ಮಗುವನ್ನು ಹೂವಿನ ತೋಟ್ದಾಗ ಹಾಗಿ ಉಧೋ ಅಂದು ಜೋಗಮ್ಮನ ಮಗನಮ್ಮಾ ಅಂದ ಪರಶುರಾಮ ಅಂತ ಹೆಸರಿಡುತ್ತಾರೆ. ಈ ರೀತಿಯಾಗಿ ಈ ಕಾವ್ಯದಲ್ಲಿ ಭಕ್ತರು ಯಲ್ಲಮ್ಮನ ಸತ್ವ ಪರೀಕ್ಷೆ ಅವಳ ಶಕ್ತಿ ತಪಸ್ಸು ಎಂತದ್ದು ಮತ್ತು ಪರಶುರಾಮನ ಜನನ ಕುರಿತು

ಈ ಕಥನ ಕಾವ್ಯ ಹಾಡಿದ್ದಾರೆ ನಂತರದ ಕಥನ ಪರಶುರಾಮನ ಬಾಲ್ಯ ಜೀವನ ಕುರಿತಾಗಿದೆ.

ಪರಶುರಾಮನ ಜನನದ ನಂತರ ಅವನ ಬಾಲ್ಯ ಯಾವ ರೀತಿಯಾಗಿ ಇರುತ್ತದೆ ಎಂಬುದನ್ನು ಈ ಕೆಳಗಿನಂತೆ ನೋಡಬಹುದಾಗಿದೆ. ಪರಶುರಾಮನ ಮೇಲಿನ ಪುತ್ರ ವಾತ್ಸಲ್ಯದಿಂದ ದಿನಕ್ಕೆ ಮೂರು ಸರ್ತಿ ಸ್ನಾನ ಮಾಡಿಸುತ್ತಾರೆ.

"ಆಗ ಮೂರು ಸರ್ತಿಗೆ ಮೈ ತೊಳಿತಾರ
ಒಂದೇ ವರ್ಷ ಎರ್ಡೆ ವರ್ಷ" ೬೮

ಹೀಗೆ ಒಂದು, ಎರಡು, ಮುರು ವರ್ಷಗಳು ಕಳೆದವು. ಐದುವರ್ಷದ ನಂತರ ಪರಶುರಾಮನಿಗೆ ಸಾಲಿಗೆ ಹಾಕುತ್ತಾರೆ. ಓದು ಕಲಿತಾನೆ ಹದಿನೆಂಟು ವರ್ಷದ ಹುಡುಗ ಆಗುತ್ತಾನೆ. ತನ್ನ ಸ್ನೇಹಿತರೊಂದಿಗೆ ಬುಗರಿ ಆಡುವ ಸಲುವಾಗೆ ತಾಯಿಗೆ ನನ್ಗೆ ಬುಗರಿ ಕೊಟ್ಟರೆ ಊಟ ಮಾಡ್ತೀನಿ ಇಲ್ಲದಿದ್ರೆ ಇಲ್ಲ. ಆಗ ಮಗ ಬುಗರಿ ಕೇಳಿದನಲ್ಲಾ ಅಂತ ಎಲ್ಲಮ್ಮ ಬಂಗಾರದ ಬುಗರಿ ಮಾಡಿ ಕೊಟ್ಟಳು. ಆಗ ಹತ್ತು ಮಂದ್ಯಾಗ ಒಂದು ಹುಡುಗರ ನೀವು ಕುಪ್ಪಿ ಹಾಕ್ತಿ ನಾನು ಆಡ್ತೀನಿ ಅಂದ, ಸರಿಯಂತ ಅಂದ್ರು. ಆ ಹುಡುಗ ಇನ್ನ ಬುಗರಿ ಒಗಿದಾಗ ಒಬ್ಬನು ಬುಗರಿ ಬಚ್ಚಿಕೊಂಡು ಗೆದ್ದಿವಿ ಅಂದ ಅದಕ್ಕೆ ಪರಶುರಾಮ ವಾದ ಮಾಡುವಾಗ ಈ ರೀತಿ ನಿಂದಿಸುತ್ತಾರೆ.

"ಎಲೇ ತಂದಿ ಇಲ್ಲದ್ದಂಗ ಹುಟ್ಟಿದಲೆ
ಊರಿಗೆ ಹುಟ್ಟಿದೋವ್ನು ಊರಿನ ಜೋಗಮ್ಮನ ಮಗ" ೬೯

ಊರಿನ ಹುಡುಗರು ಪರಶುರಾಮನ ಸ್ನೇಹಿತರು ನಿನ್ನ ತಂದೆ ಇಲ್ಲ, ತಾಯೊಬ್ಬಳೆ ಇರೋದು. ನಿನ್ನ ತಂದೆ ತೋರಿಸು. ನೀನು ಊರಿಗೆ ಹುಟ್ಟಿದೋನು, ನಮ್ಮ ತಂದೆಯ ತೋರಿಸುತ್ತೇವೆ ನಾವು ಎಂದು ಅವನ ಹುಟ್ಟಿನ ಬಗ್ಗೆ ಕಾಡಿಸುತ್ತಾರೆ. ಆಗ ಪರಶುರಾಮ ಕೋಪಿಷ್ಟನಾಗಿ ನನ್ನ ತಂದೆ ಯಾರೆಂದು ನಮ್ಮ ತಾಯಿಗೆ ಕೇಳಿ ಹೇಳುವೆ. ತಂದೆ ಇರಲೇ ಬೇಕಲ್ಲ ಅಂತ ಯೋಚಿಸುತ್ತಾನೆ. ತಂದೆಯ ತೋರಿಸದಿದ್ದರೆ ನಮ್ಮ ಅಮ್ಮನ ಬಿಡೋದಿಲ್ಲ ಅಂತ ಶಪತ ಮಾಡುತ್ತಾನೆ.

ತಂದೆಯ ಸಾಕ್ಷಾತ್ಕಾರಕ್ಕಾಗಿ ಪರಶುರಾಮನ ಪ್ರಯತ್ನ ಮಾಡಿದ್ದು, ತನ್ನ ತಾಯಿಗೆ ತಂದೆಯ ತೋರಿಸೆಂದು ಕಾಡಿಸಿದ ಪರಿಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಪರಶುರಾಮ ಮನೆಗೆ ಬರುತ್ತಾನೆ. ತಾಯಿಯ ಪಾದನ ಹಿಡಿದಾನೆ. ಅಮ್ಮ ನಿನ್ನ ಪಾದಕ್ಕೆ ಶರಣು ತಾಯಿ ರೇಣುಕೆ ಎನ್ನುವಾಗ ಎಲ್ಲಮ್ಮ ಅಪ್ಪ ಮಗನೇ ಈಗ ಊಟ ಮಾಡೆಂದಾಗ ಪರಶುರಾಮ ನಾನು ಈಗ ಉಂಬಾಕಿಲ್ಲ ಎಂದು ಈ ರೀತಿ ಹೇಳುತ್ತಾನೆ.

"ಅಪ್ಪಾ ಅಂಬಾಕಿಲ್ಲೆ ದೇವಿ
ನಮ್ಮಪ್ಪೇನು ಸತ್ತೋಗ್ಯಾನ

ನಮ್ಮಪ್ಪೇನು ಉಳದಾನೇನು
ಹೇಳೋತನಕಮ್ಮ ನಿನ್ನ ಉಳಿಸೋದಿಲ್ಲಮ್ಮಾ
ಭೂಮಿಮ್ಯಾಲೆ" ೭೦

ಪರಶುರಾಮ ತನ್ನ ತಂದೆಯ ತೋರಿಸು ಇಲ್ಲದಿದ್ದರೆ ನಾನು ನಿನ್ನ ಭೂಮಿ ಮ್ಯಾಲೆ ಉಳಿಸೋದಿಲ್ಲ ಎಂದು ಹಠ ಹಿಡಿಯುತ್ತಾನೆ. ಇದು ಪ್ರಸ್ತುತ ಮತ್ತು ಪ್ರಾಚೀನ ಕಾಲದಿಂದಲೂ ತಂದೆ ಇಲ್ಲದ ಮಕ್ಕಳ ಸ್ಥಿತಿ, ಅವರಿಂದಾಗುವ ನಿಂದನೆಗಳ ತೋರಿಸುತ್ತದೆ. ಈ ಕಾವ್ಯದ ಭಾಷೆ, ಸಾಹಿತ್ಯವು ಆಧುನಿಕ ಕಾಲಮಾನಕ್ಕೆ ತಕ್ಕಂತೆ ರಚನೆಯಾಗಿದ್ದು, ಪೌರಾಣಿಕ ಕಥೆಯನ್ನು ಆಧುನಿಕ ಭಾಷೆಯ ಶೈಲಿಯಲ್ಲಿ ಕಟ್ಟಿ ಹಾಡುತ್ತಾರೆ. ಇದು ಮೌಖಿಕ ಸಾಹಿತ್ಯವು ಬೆಳೆದು ಬಂದ ಬಗೆಯನ್ನು ತೋರಿಸುತ್ತದೆ. ಮೌಖಿಕ ಸಾಹಿತ್ಯ ಸ್ಥಿರವಾದುದಲ್ಲ ಇದು ನಿತ್ಯ ನಿರಂತರ ಬದಲಾವಣೆಗೆ ಒಳಪಟ್ಟು ಕಾವ್ಯ ಕಥೆ ಬದಲಾವಣೆ, ಶೈಲಿ, ರೀತಿಯಲ್ಲಿ ಅನೇಕ ವ್ಯತ್ಯಾಸ ಆಗುವುದನ್ನು ನೋಡಬಹುದಾಗಿದೆ.

"ಪುಣ್ಯ ಮಾಡಿದರೆ ಮಕ್ಕಳ ಆಗೋದಿಲ್ಲಮ್ಮ
ಇನ್ನ ಗಂಡ ಇಲ್ದೇ ನಿ ಹ್ಯಾಂಗ ಹಡಿದೆಮ್ಮ" ೭೧

ಗಂಡನಿಲ್ಲದೇ ಜನಿಸಿದ ಪರಶುರಾಮನ ಪ್ರಶ್ನೆಗೆ ಉತ್ತರಿಸದ ಎಲ್ಲಮ್ಮಗೆ ಹೇಳೋತನ್ಕ ನಿನ್ನ ಬಿಡಲ್ಲ ನೀನು ಕರೇ ಹುಲಿಗೆವ್ವ ಕರೆ ಕಾಕಿಗೆ ಉಗ್ತೀನಿ. ನಾನು ರಕ್ತಕ್ಕೆ ಹುಟ್ಟಿದೋನು, ರಕ್ತ ಕುಡಿತೀನಿ ಅಂದ. ಲಿಂಗನಗೌಡ ನಾಗಮ್ಮ ನೋಡಿ ಗಂಡ ಹೋಗಿ ಹೆಣ್ಣು ಮಾಡ್ಯಾಳೆ. ಮನೆಯಾಗ ಕಸ ಬಳಿಯೋರಿಲ್ದಂಗ ಮಾಡೇಳೆ, ಎಲ್ಲ ಸೀರೆ ಉಡಿಸ್ಯಾಳೆ ಅಂತ ಅಡ್ಡಲ್ಗಿ ಕೊಡ್ಸಿ ಕಳಿಸಿದರು. ಊರಿಗೆ ಜೋಗಮ್ಮನ ಮಗ ಊರಿಗೆ ಗೌಡ್ರು ಆಸ್ತಿ ನಿಂದೆ ಅಂದರು ಆಸ್ತಿ ಬೇಕಿಲ್ಲ ನಮ್ಮಪ್ಪ ಬೇಕು. ನನಗೆ ಜೀವ ಕೊಟ್ಟ ತಂದಿನ ನೋಡಬೇಕು ಎನ್ನುವನು. ಅಕ್ಕಿ ಬ್ಯಾಳೆ ಜಗಪುಟ್ಯಾಗ ಹಾಕಿ ಸೀರೆ ಉಡಿಸಾಕ ಹುಟ್ಟಿ ತಲ್ಲಿಗೆ ಹೋದರು. ಇದು ಹಣ, ಆಸ್ತಿಗಿಂತ ತನ್ನ ತಂದೆಯೇ ಮುಖ್ಯ. ತಂದೆ ಇಲ್ಲದವರ ಗೋಳು ಅವರ ನೊವು ಸಂಕಟಗಳ ಬಿತ್ತರಿಸುವ ನಿಟ್ಟಿನಲ್ಲಿ ಕಾವ್ಯ ಕಟ್ಟಿ ಹಾಡುತ್ತಾರೆ.

ತನ್ನ ತಂದೆಯ ನೋಡುವ ಮತ್ತು ತಾಯಿಗೆ ತಂದೆಯ ತೋಘರಿಸು ಎಂದು ವಿವಿಧ ವೇಶದಲ್ಲಿ ತಲೆಮರಿಸಿಕೊಳ್ಳುವ ತಾಯಿಗೆ ವಿವಿಧ ವೇಶಗಳಾಗಿ ಪರಶುರಾಮನ ಅವತಾರದ ಚಿತ್ರಣ ಈ ಕೆಳಗಿನಂತಿದೆ.

"ಯಮ್ಮಾ ಬೆಟ್ಟದ ಗುಡ್ಡದಲ್ಲಿ ನನ್ನ ಬಿಟ್ಟೆ ಹೋದೆಮ್ಮ
ನನ್ನ ಪರದೇಶಿ ಮಾಡ್ದೆ ಆಗ ನನ್ನ ಅಡಿವ್ಯಾಗ
ಯಮ್ಮಾ ತಾಯಿ ಇಲ್ಲಮ್ಮ ನನ್ಗೆ ತಂದೆ ಇಲ್ಲಮ್ಮ" ೭೨

ತಾಯಿನ ಬೆಟ್ಟ, ಗುಡ್ಡ, ಗಿಡ ಗಿಡದಾಗ ಹುಡುಕುತ್ತಾನೆ. ಪರಶುರಾಮನ ದುಃಖ ಕೇಳಿ ಪಾರ್ವತಿ ಪರಮೇಶ್ವರರಥನ ಕೆಳಗೆ ಇಳ್ಸಿ ಅವನ ಕೇಳಿದರು ಯಾಕ ಅಳತೀಯೋ ಅಂತ ಏನ ಕಳಕೊಂಡಿಯೋ ಅಂತ ಕೇಳಿದ್ದಕ್ಕೆ, ನಾನು ಪರಶುರಾಮ ನನ್ನ ತಂದೆ ತೋರಿಸು ಅಂದ್ರ ಅಲ್ಲಿದಾನ ಇಲ್ಲಿದಾನ ಅಂತ ತೋರಿಸದೆ ಮಾಯ ಆಗ್ಯಾಳ ಅಂದ. ಆಗ ಅವರು ಕನ್ನಡಿ ಕೊಟ್ಟು ನೋಡು ನಿಮ್ಮ ತಾಯಿ ಸಿಕ್ತಾಳ ಅಂತ ಹೇಳಿ ಹೊರಟರು. ಪರಶುರಾಮ ಕನ್ನಡಿ ಹಿಡಿದು ಗಿಡ, ಕಲ್ಲು ಮಕ ನೋಡಿದ ಕೊನೆಗೆ

ಭೂಮ್ಯಾಗ ಇರುವ ರೇಣೂಕೆ ಕಂಡಳು. ಭೂಮ್ಯಾಗ ರೇಣುಕೆ ನಾಗಸರ್ಪ ಆಗ್ಯಾಳೆ ನೋಡಿ ನಾನು ರಕ್ತಕ್ಕೆ ಹುಟ್ಟಿದೋನು ರಕ್ತ ಕುಡಿಯೋತನಕ  ಬಿಡಾದಿಲ್ಲಂತ ಹಲ್ಲು ಕಡಿದು ದಗ್‌ನೆ ಉರಿದು ಕಾಲಿನಾಗ ತುಳಿದು ಭೂಮ್ಯಾಗ ಬಂದು ತಾಯಿಯ ಕುತ್ಗಿ ಹಿಡಿದು ಸರ‍್ರಂತ ಎಳ್ಕೊಂಡು ಬರುತ್ತಾನೆ. ನಿನ್ನ ಹದ್ನಾರು ತುಂಡು ಮಾಡ್ತಿನಿ ಅಂದ. ಕಡಿಬ್ಯಾಡಪ್ಪ ನಿಮ್ಮಪ್ಪನ ಹೆಸರ ಹೇಳ್ತೀನಿ ಅಂದಳು. ಆಗ ಕೈಬಿಟ್ಟ ಪರಶುರಾಮ ನೆಟ್ಟಗೆ ನಿಂತು ಎಲ್ಲಮ್ಮ ಉಧೋ ಅಂತ ಜೋಗಮ್ಮಾಗಿ ನಿಂತಳು. ಪರಶುರಾಮ ಮುಂಗಲಿಯಾಗಿ ತಾಯಿಯ ಪಾದವನ್ನು ಹಿಡಿಯುತ್ತಾನೆ.

ಎಲ್ಲಮ್ಮಗೆ ಪರಶುರಾಮ ತನ್ನ ತಂದೆಯ ಹೆಸರು ಹೇಳಮ್ಮ ಊರಿಗೆ ತಿಳಿಸುತ್ತೀನಿ. ಮತ್ತೆ ಅದೇ ಪ್ರಶ್ನೆ ಅದೇ ಉತ್ತರ ನನ್ಗೆ ಗಂಡಿಲ್ಲ, ನಿನ್ಗೆ ತಂದಿಲ್ಲ. ಗಂಡನಿಲ್ಲದೆ ಗಂಡು ಹೆಂಗೆ ಹುಟ್ಟಿದೆ? ಇದೇ ಪ್ರಶ್ನೆ ಕೇಳುವನು. ಆಗ ಎಲ್ಲಮ್ಮ ಉಧೋ ಅಂತ ಜಗಪುಟ್ಟಿ ಹೊತ್ಕೊಂಡು ಹೋಗುವಾಗ ಪರಶುರಾಮ ಹಿಂದೆ ಬರುವನು. ನೀನು ಮುಂದೆ ಹುಟ್ಟಿರೋನು ಮುಂದೆ ನಡಿಯಪ್ಪ ಅಂದು ಹಿಂದೆ ಬರುತ ನೀನು ಮೊದಲು ಹುಟ್ಟಿದ ಮಾಯದ ಎಲ್ಲಮ್ಮ ಮಾಯಾಶಕ್ತಿ ನೀನು ಅಂತ ಹೊಳಿ ದಂಡಿಗೆ ಬಂದರು. ನೀರಡಕಿ ಅಂತ ಬಾರೆ  ಗಿಡ ಸುತ್ತಿ ಉಧೋ ಅಂತ ಜಗಪುಟ್ಟಿ ಇಳ್ಸಿದ್ಲು. ಪರಶುರಾಮ ಕಪ್ಪೆ, ಮೀನು, ಕ್ವಾಣ, ಬಂಡಿ ದಪ್ಪದಾವ ಅಂತ ನಾನೇ ನೀರು ಹಾಕತಿನಿ ಕುಡಿ ಅಂದ. ಬೇಡ ಅಂತ ನಾನೇ ಒಂದು ಕೊಡ ಕುಡಿತೀನಿ ಅಂತ ನೀರು ಕುಡಿಯಾಕಂತ ಹೋಗಿ ಎಲ್ಲಮ್ಮ,

"ಶರಣದೇವಿ ಗಂಗಾ ದೇವಿ
ಜೀವಕ್ಕ ಜೀವ ಬರುತಿನಿ ನಾನು
ನಿನ್ಗೆ ಜೀವದ ಜೊತೆ ನಾನು
ಏ.. ಕುಪ್ಪಳಿಸಿ ಹೊಳೆ ದಂಡಿದಾಗ
ಉಣರಿಟ್ಟಾಳೆ ಎಲ್ಲಮ್ಮ ಆಗ" [೭೩]

ನೀರು ಕುಡಿತೀನಂತೇಳಿ ಎಲ್ಲಮ್ಮ ಹೊಳಿಯಾಗ ಮುಳಿಗಿ ಕೋಣನ ದಪ್ಪ ಮೀನಿನ ಹೊಟ್ಯಾಗ ತೂರಿಕೊಂಡು ಬಿಟ್ಲು. ಇನ್ನ ನನ್ನ ಮಗ ಸಮುದ್ರದಾಗ ಬರಾಂಗಿಲ್ಲಂತ ಬಿಟ್ಟ ಹೋತಾನಂತ ಉಧೋ ಅಂದು ಗಡ್ಡಿಗೆ ಹಾರತೀನಿ ಅಂತ, ಜಗ ಹೊತ್ಕೊಂತೀನಿ ಅಂತ ಮೀನ್ಹೊಟ್ಟಿದಾಗ ಸಂತೋಷದಿ ಇದಾಳ ದೇವಿ. ಪರಶುರಾಮ ನೀನು ಎಲ್ಲಿಗೆ ಹೋದರು ಬಿಡೋದಿಲ್ಲ. ನೀರು ಎಲ್ಲಿಗೆ ಹೋತಾವ ನೋಡಾನ, ನಿನು ಸತ್ತರು ಎಲುಬು ತಂದು ಮಂಗಳಾರ, ಶುಕ್ರವಾರ ಭಂಡಾರ ಹಚ್ಚಿ ಪೂಜೆ ಮಾಡೇನು ಎಂದ. ನೀನು ಮಾಯೆ ಎಲ್ಲಮ್ಮ ಅಂತ ಸಮುದ್ರದಾಗ ಹೊಗಕೀನ ಕಪ್ಪೆ ಹಿಡ್ದು ಹೊಟ್ಟೆ ಸೀಳ್ಯಾನ. ತ್ಯಾಬಲಿ ಹಿಡ್ದು ಹೊಟ್ಟೆ ಸೀಳ್ಯಾನ. ಮೀನು ಹಿಡ್ದು ಹೊಟ್ಟೆ ಸೀಳ್ಯಾನೆ ಎಲ್ಲ್ಮಮ ಸಿಗಲಿಲ್ಲ. ಆಗ ಸಮುದ್ರದಾಗೆ ಏಡಿಯಾಗಿ ಒಂದೋಂದು ಕಣ್ಣು ಗೇಣ ಉದ್ದ ಎಲ್ಲಮ್ಮ ಮೀನ್ಹೊಟ್ಯಾಗ ಇರಾಕಿ ಗಾಲಿಗೆ ಬರಬೇಕಲ್ಲ ಮಿನು ಬಾಯಿ ತೆರೆದಾಗ ಅಂತ ಏಡಿ ಕಣ್ಣಿಗೆ ಫಲಕ್ಕಂತ ಮಿಂಚೆ ಹೊಡ್ದಾಳೆ ದೇವಿ ಮೀನ್ಹೊಟ್ಯಾಗ ಹೊಕ್ಕಂಡ್ರೆ ಬಿಡ್ತೀನ ಅಂತ ಮೀನ ಕುತ್ತಿಗೆ ಹಿಡ್ದು ಎರಡು ತುಂಡು ಮಾಡ್ತೀನಿ ಅಂತ ಹಿಡ್ದುಬಿಟ್ಟ. ಆಗ ದೇವಿ ಅಯ್ಯೋ ಮಗನ ಮೀನಿನ ಹೊಟ್ಯಾಗ ಇದೀನಪ್ಪ ಜೀವ ಕಳಿಬ್ಯಾಡ ಗಂಗಾಜ್ಞ ನಿಮ್ಮಪ್ಪನ ಹೆಸರ ಹೇಳ್ತೀನಿ ಅಂದಳು. ನೀನು ಗಂಗಾಲಿ ಎಲ್ಲಮ್ಮ ಅಂದು ಮೀನ ಗಡ್ಡಿಗೆ ಒಗಿದಾನೆ

ದೇವಿ ಮೀನ್ನೊಟ್ಯಾಗಿಂದ ಕುಪ್ಪಳಿಸಿ ಹುಲಿಗಿ ಪಟ್ಟಣಕ್ಕೆ ಹೋಗ್ಯಾಳೆ. ಪೌರಾಣಿಕ ಕಥನ ಕಾವ್ಯಗಳಿಂದ ಹಿಡಿದು ಅನೇಕ ಜನಪದ ನಂಬಿಕೆಯ ಪ್ರಕಾರ ಈ ತರಹದ ವೇಶಬದಲಿಸುವ, ಮತ್ತೊಂದು ಜೀವದಾಗ ಸೇರುವ ಕಲ್ಪನೆಯು ಇದ್ದು ಆಧುನಿಕ ಸಂದರ್ಭದಲ್ಲೂ ಸಹ ದೇವರು ಮೈ ಏರುವುದನ್ನು ನಾವು ನೋಡಬಹುದಾಗಿದೆ.

ಮತ್ತೊಂದು ಜೀವದಾಗ ಜೀವ, ಆತ್ಮ ಸೇರುವುದಾದರೂ ಹೇಗೆ? ಎಂಬ ಪ್ರಶ್ನೆಗೆ ಉತ್ತರ ಸಿಗುವುದು ಕಷ್ಟ. ಆದರೆ ಇಂತಹ ಕಲ್ಪನೆ ದೇವಸ್ಥಾನದಲ್ಲಿ ಪೂಜಾರಿಗೆ ದೇವರು ಬರುವಂತೆ ದೇವರು ಹೇಳುವ ಕಲ್ಪನೆ, ಭೂತ, ದೆವ್ವದ ಕಲ್ಪನೆ ಇಂದಿಗೂ ಇರುವುದನ್ನು ನೋಡಬಹುದಾಗಿದೆ. ಈ ಜೋಗತಿ ಯಲ್ಲಮ್ಮನ ಆರಾಧಕರು ದೇವಿಯಂತೆ ವರ್ತನೆ ಮಾಡುವುದು ಇಂದಿಗೂ ಆಚರಣೆಯಲ್ಲಿರುವುದನ್ನು ಸವದತ್ತಿಯಲ್ಲಿ ನಮ್ಮೂರಲ್ಲಿ ಸಹ ಊರು ಊರುಗಳಲ್ಲಿ ಈ ಆಚರಣೆ ಕಾಣಬಹುದಾಗಿದೆ.

ಹುಲಿಗೆಯಲ್ಲಿ ಬಂದ ಎಲ್ಲಮ್ಮ ಸುಡುಗಾಡಿನಾಗ ಬಂದು ನನ್ನ ಮಗ ಹುಡುಕಾಕ ಬರ್ತಾನೆ ಬಂದು ಹೊಡಿತಾನೆ ಅಂತ ಊರಾಕೆ ಬರ್ತೀನಿ ಅಂತಾಳೆ. ಸುಡುಗಾಡದಾಗ ಯಾವಳೋ, ಎತ್ಲಾಗೋ ನಮ್ಮನೆಯಾಗಬೇಡ ಅಂದರು. ಅಲ್ಲಿ ಹೆಣ ಹೊತ್ಕೊಂಡು ಬಂದಿದ್ದ ಬಿದಿರಿನ ಕಡ್ಡಿಯಿಂದ ಅಡ್ಡಲ್ಗಿ ಮಾಡ್ಕೊಂಡು, ಕುಣಿಮ್ಯಾಲ ಹಾಕಿದ್ದ ಹೂವ್ವ ಹಾಕಿಕೊಂಡ್ಳು, ಊದಿನಕಡ್ಡಿ ಹಚ್ಚಿಕೊಂಡು, ಅರಿಶಿಣ ಭಂಡಾರ ಇಟ್ಕೊಂಡು ನೂರ ವರ್ಷದ ಮುದುಕಿ ಆದ್ಹಾಂಗ ಆಗಿಬಿಟ್ಳು ದೇವಿ. ಕೂದಲು ಒಂದು ಮರದ ಅಗಲ ಆದವು. ಮುದುಕಿ ಅಡ್ಡಲ್ಗಿ ಹಿಡ್ಕೊಂಡು ಗಡ ಗಡ ನಸುಕೋತ ಬಂದ್ಳು. ಮುದುಕಿ ದೇಶ ಹುಟ್ಟೋಕೆ ಮುಂಚೆ ಹುಟ್ಟೇತಿ ಅಂತೇಳಿ ಊರಿನ ಗೌಡ್ರ ಮನಿಗೆ ಬಂದು ಉಧೋ ಅಂತಾ ಇರಾಕ ಜಾಗ ಕೇಳ್ತಾಳೆ, ಜ್ವಾಳ, ಬೇಳೆ ಕೇಳುವಾಗ, ಗೌಡ್ರು ಹತ್ತು ಎಕರೆ ಜ್ವಾಳ ಹಾಕಿದ್ವಿ ಹತ್ತು ಪೈಸೆಗೆ ಜ್ವಾಳ ಕೇಳ್ತಾರ ಅಂತ ಮನೇಳಿ ಇಟ್ಟೇವಿ ಕುಂದ್ರಾಕ, ನಿಂದ್ರಾಕ ಜಾಗ ಇಲ್ಲ. ಆಗ ಎಲ್ಲಿಗೆ ಹೋದ್ಲು ದೇವಿ ಮುಂದೆ ಹಾಲಮತ ಕುರುಬರ ಹತ್ತಿರ ಬಂದ್ಳು ದೇವಿ.

"ಯಪ್ಪಾ ಹಾಲುಮತ ಕುರುಬರೆ
ವನೆ ಜಾಗಾ ಕೊಡ್ರಪ್ಪ
ಯವ್ವ ಹತ್ತು ಕುರಿ ಈದು ಬಿಟ್ಟಾವ
ಮನೆಲಿಂದ ಹೊರಗೆ ಬಿಟ್ರೆ ಕಾಲು ಮುರಿತಾರಂತ
ಹುಡುಗರು
ಮನ್ಯಾಗ ಕೂಡ್ಸಿ ಕರೆ ಕಂಬ್ಳಿ ಸುತ್ತ್ಯಾರಿಕ್ಯಂಡು
ಮನಿ ಮುಂದ ಮಲ್ಗತೇವಿ ಜಗ ಇಲ್ಲು"೭೪

ಹಾಲುಮತದ ಕುರುಬರ ಮನೇಳಿ ಹತ್ತು ಕುರಿಗಳು ಈದು ಆ ಮರಿಗಳ ಕಾಲು ಮುರಿತಾರ ಹುಡುಗರು ಅಂತೇಳಿ ಮನೇಲಿ ಬಿಟ್ಕೊಂಡು ಜಾಗ ಇಲ್ಲ ಅಂದಾಗ ಅಲ್ಲಿಂದ ಕ್ವಾಮಟರ ಮನೆಗೆ ಬಂದ್ಳಿ ದೇವಿ. ಅಲ್ಲಿ ಕ್ವಾಮುಟರ ಮನೇಲಿ ಇರಾಕೆ ಜಾಗ ಕೇಳಿದರೆ ಅವರು ಕರ್ಪೂರ ವ್ಯಾಪಾರಕ್ಕೆ ಜೋಡು ತಂದು ಮನೇಳಿ ಇಟ್ಟುಕೊಂಡಾರೆ ಅಲ್ಲಿಂದ ಹುಲಿಗೇರ ಮನೆಗೆ ಬಂದಳು.

ಈ ಕಾವ್ಯದ ಮೂಲಕ ಬುಡಕಟ್ಟು ಸಮುದಾಯದ ಜೀವನ ಪದ್ಧತಿ ಅವರ ಜೀವನ ಶೈಲಿ, ಅವರ ಸ್ವಾವಲಂಬೀ ಜೀವನ, ಕುರುಬರ (ಹೈನುಗಾರಿಕೆ) ಕೃಷಿ ಸಾಗಾಣಿಕೆ, ಕ್ವಾಮಟರ ಕರ್ಪೂರ ವ್ಯಾಪಾರ ಮೊದಲಾದ ಸಮುದಾಯದವರ ಜೀವನ ಶೈಲಿ ತಿಳಿಯಬಹುದಾಗಿದೆ. ಹಾಗೆಯೇ ಊರಿನ ತಳ ಸಮುದಾಯದವರಾದ ಅಗಸರು, ಮಾದರು, ವಡ್ಡರು, ಮೊದಲಾದವರ ಮನೆಗೆ ಎಲ್ಲಮ್ಮ ಹೋದಾಗ ಅವರು ಊರಿಗೆ ಮಾರಮ್ಮ ನಾವು ಚಿಕ್ಕವರು ನಮ್ಮ ಮನೆಯಾಗ ಜಾಗ ಕಡಿಮೆ ಐತೆ ಅಂಥ ಹೇಳುತ್ತಾರೆ. ದೇವಿಗ ಮನಿಯಾಗ ಸೇರಿಸಿದರ ಏನಾರ ತಪ್ಪು ನಡೆದರೆ ನಮಗೆ ಒಳ್ಳೆಯದಲ್ಲ ಅಂತ ಎಲ್ಲಾ ಸಮುದಾಯದವರು ಒಂದಲ್ಲಾ ಒಂದು ರೀತಿಯಾದ ನೆಪ ಹೇಳುತ್ತಾರೆ. ಮಾದರ ಹರಳಯ್ಯನ ಮಗಳು ಮಾರೆಕ್ಕನ ಮನೆಗೆ ಬಂದು ಕೇಳುತ್ತಾಳೆ. ಮಾರೆಕ್ಕ ತನ್ನ ಹತ್ತು ಮಕ್ಕಳು ಸತ್ತದ್ದನ್ನು ಅಳಲು ಹೇಳುತ್ತಾಳೆ. ಅಪರೂಪಕ್ಕೆ ಮಗು ಹುಟ್ಟಿದರೆ ದೇವಿವಾರ ಹುಟ್ಟಿದ ಕಾರಣ ದೇವಿಯ ಸೇವೆಗೆ ಒಪ್ಪಿಸುವರು. ಎಲ್ಲಮ್ಮಗೆ ಯಾರ ಮನೆಯಲ್ಲಿ ಜಾಗ ಸಿಗುವುದಿಲ್ಲ. ಕೊನೆಗೆ ಮಾದರ ಮಾರೆಕ್ಕನ ಮನೆಯಲ್ಲಿ ಗಲ್ಲಿ ನೋಡುತ್ತಾಳೆ.

"ಯಮ್ಮಾ ಇನ್ನವಾದರೆ ಗಳ್ಕಿ ಕುಣಿ
ಗಳ್ಳಿ ಕುಣಿದಾಗ ಸೇರಿ ಬಿಟ್ಟಾಳ" [೭೫]

ಆ ಗಳ್ಳಿ ಕುಣಿದಾಗ ಹೊಕ್ಕೊಂಡು ಕಿಲಕಿಲ ನಗುತಾಳೆ. ದೇವಿ ತೇಗಲು ಮುಚ್ಚಿಕೊಂಡು ಅದು ಕೊಳೆತ ನಾತಪ್ಪ ಆದರೂ ಸಹಿಸಿಕೊಳ್ಳುವ ಸ್ಥಿತಿ ತನ್ನ ಮಗನಿಂದ ತಪ್ಪಿಸಿಕೊಳ್ಳುವ ಅನಿವಾರ್ಯತೆ ಎಲ್ಲಮ್ಮಗಿದೆ.

**ಹುಲಿಗೆಯಲ್ಲಿ ಪರಶುರಾಮನಿಂದ ಮೀನಗಸಿ ಕಟ್ಟಿಸುವಿಕೆ**

ಪರಶುರಾಮ ತನ್ನ ತಾಯಿಗೆ ತಂದೆಯ ತೋರಿಸುವ ಸಲುವಾಗಿ ಬೆನ್ನು ಬೀಳುತ್ತಾನೆ. ಎಲ್ಲಮ್ಮ ತಪ್ಪಿಸಿಕೊಳ್ಳಲು ಸಮುದ್ರದಾದ ಮೀನಿನ ಹೊಟ್ಟ್ಯಾಗ ಸೇರಿಕೊಂಡಾಗ ಪರಶುರಾಮ ಏಡಿಯಾಗಿ ಮೀನ ಹಿಡಿದು ಗಡ್ಡಿಗೆ ಒಗದಾನೆ. ಹುಲಿಗೆಯ ವಡ್ಡರು, ಅಂಬಿಗರಿಗೆ ಕರಿತಾನೆ ಮೀನ ಹಿಡಿದು ಗಡ್ಡಿಗೆ ಒಗದೀನಿ ತಿರುಗಿ ಬೀಳತೈತಿ. ಅದ ಮೈಮೇಲ ಹೊಟ್ಟು ಒಂದೊಂದು ಬಂಡಿ ಚಕ್ರ ಅಗಲ ಇದಾವ ಗಂಡು ಕೊಡ್ಲಿ, ಕುಡಗೋಲು, ರಂಪದಿಂದ ಕಡ್ದುರು ಜೀವ ಬಿಡ್ತು. ಅದರ ಹೊಟ್ಟ್ಯಾಗ ಎಲ್ಲಮ್ಮಿಲ್ಲ ಮಲ್ಲಮ್ಮಿಲ್ಲ. ಅದರ ಹೊಟ್ಟ್ಯಾಗ ಉಗ್ರನರಸಿಂಹನ ತಲೆ ಇದೆ. ಅದಕ್ಕೆ ಮೂಗಿಲ್ಲ ಮಕಯಿಲ್ಲ. ಬರಿ ತಲೆ ಆಗ ಅಡ್ಡಲುಬು ಬಂಡಿಗೆ ಹಾಕಿ ಹುಲಿಗಿಗೆ ಬಂದನು.

"ಅಗಸಿ ಕಟ್ಟ್ಯಾನ ಮೀನಿಂದು ಹುಲಿಗಿದಾಗಮ್ಮ
ಹುಲಿಗಿದಾಗ
ಪರಶುರಾಮ"
"ತಲಿಗೆ ಪೂಜೆ ನಿನಗೆ
ಜೀವಗ ಪೂಜೆ ಇಲ್ಲಂತೆ

ಆಗ ಇನ್ನ ಬುಡಕಲ್ಲ ಮಾಡಿ
ಆಗ ಅಗಸ್ಯಾಗ ಇಡ್ತಾನ”[೭೬]

ಹುಲಿಗೆಯಲ್ಲಿ ಹಾಲಿನಿಂದ ತೊಳೆದು ಮೀನಗಸಿ ಕಟ್ಟಿಸಿ ಅದರೊಳಗ ಇಟ್ಟು ತಲಿಗೆ ಪೂಜೆ ದೇವಿಗೆ ಅಂಥ ಬುಡಕಲ್ಲು ಮಾಡಿಸಿ ಅಗಸ್ಯಾಗ ಇಟ್ಟು ಬಿಡ್ತಾನ. ಇದು ತಾಯಿಯ ಮೇಲಿನ ಕೋಪದ ಪ್ರಭಾವದಿಂದಾದ ಸಿಟ್ಟಾಗಿದ್ದು ಈ ರೀತಿಯ ಆಚರಣೆಗೆ ಕಾರಣವಾಗಿರುವುದನ್ನು ಈ ಕಾವ್ಯದಲ್ಲಿ ನೋಡಬಹುದಾಗಿದೆ. ಹುಲಿಗಿಯೊಳಗಿನ ಪರಶುರಾಮ ಜೋಗಮ್ಮ ಆಗಿದ್ದು ಈ ಕೆಳಗಿನಂತೆ ತಿಳಿಯಬಹುದಾಗಿದೆ.

ಹುಲಿಗಿಗೆ ಬಂದು ಪರಶುರಾಮ ತಾಯಿಯ ಹುಡುಕುವ ಸಲುವಾಗಿ ಜೋಗಮ್ಮಳಾಗಿ ವೇಶ ಧರಿಸುತ್ತಾನೆ. ಅವನ ಈ ವೇಶದ ವರ್ಣನೆ ಈ ಕಾವ್ಯಗಳ ಮೂಲಕ ತಿಳಿಯಬಹುದಾಗಿದೆ. ತಂದೆಯ ತೋರಿಸು ಎಂಬ ಪ್ರಶ್ನೆಗೆ ಪರಶುರಾಮನಿಗೆ ಹೆದರಿ ತಲೆಮರಿಸಿಕೊಂಡು ಹುಲಿಗಿಯಲ್ಲಿ ಅಡಗಿರುವ ಎಲ್ಲಮ್ಮಳನ್ನು ಹುಡುಕುವ ಸಲುವಾಗಿ ಪರಶುರಾಮ ಹೊಳೆದಂಡ್ಯಾಗ ಸ್ನಾನ ಮಾಡುತ್ತಾನೆ. ಇದು ದೇವರ ಪ್ರತಿಯೊಂದು ಕಾರ್ಯಗಳಲ್ಲಿಯೂ ಸಹ ಈ ತರಹದ ಹೊಳೆದಂಡ್ಯಾಗ ಸ್ನಾನ ಮಾಡುವ ಪದ್ಧತಿ ತಿಳಿದು ಬರುತ್ತದೆ. ಗಂಗಾ ಸ್ನಾನ ಪರಿಕಲ್ಪನೆಯು ಪೌರಾಣಿಕ ಕಾಲದಿಂದಲೂ ಬಂದಿದ್ದು ಗಂಗೆ ಎನ್ನುವುದು ಪವಿತ್ರ, ನಾವು ಮಾಡಿದ ಕರ್ಮಗಳ ನಾಶ ಮಾಡುವುದು ಎಂಬ ಕಲ್ಪನೆಯು ಇಂದಿಗೂ ಕಾಣಬಹುದಾಗಿದೆ. ಆದಿಮಾನವರಂತೂ ತಮ್ಮ ಬೇಟೆ ಸಂಸ್ಕೃತಿಯಿಂದ ಮೊದಲು ಅಲೆಮಾರಿಗಳಾಗಿದ್ದು, ಕಾಲಾಂತರ ಒಂದೆಡೆ ನೆಲೆಸುವುದು, ಕೃಷಿ ಮಾಡುವುದು, ಸಮುದಾಯ ಕಲ್ಪನೆಯಲ್ಲಿ ತೊಡಗಿದ್ದು ನದಿ, ಸರೋವರ, ಹಳ್ಳಗಳ ಪಕ್ಕದಲ್ಲಿ ನೆಲೆಸಿ ದೈನಂದಿನ ಕಾರ್ಯ ಚಟುವಟಿಕೆಗಳಿಗೆ ನೀರು ಬಹುಪಯೋಗಿಯಾಗಿ ಬಳಸಿ ಜೀವನ ಸಾಗಿಸಿದ್ದು ಕಾಣಬಹುದಾಗಿದೆ. ಆದ್ದರಿಂದ ಈ ಗಂಗಾಸ್ನಾನ, ತುಂಗಾಪಾನ ಎಂಬ ಕಲ್ಪನೆ ಬೆಳೆದಿರುವುದನ್ನು ನೋಡಬಹುದಾಗಿದೆ.

ಪರಶುರಾಮ ಹೊಳೆದಂಡ್ಯಾಗ ಸ್ನಾನ ಮಾಡಿ ಬೇವಿನ ತಪ್ಲ ಸೀರೆ ಸುತ್ತಿಕೊಂಡು ಬೇವಿನ ಗೆರೆ ಬಳೆ ಮಾಡಿಕೊಂಡು, ಮೂಗುತಿ ಇಟ್ಟುಕೊಂಡು ಜಗಪುಟ್ಟಿ ಹೊತ್ಕೊಂಡು ಬರುವುದನ್ನು ಈ ರೀತಿ ಕಾಣಬಹುದಾಗಿದೆ.

“ಗಂಡು ಹೋಗಿನೆ ಹೆಣ್ಣುವಾಗಿನಿ
ಯಮ್ಮ ಹೆಣ್ಸರ ಬಾಯಾಗ ಮಣ್ಣು ವಾಕ್ಯನೆ
ಮಗ ಥೈ ಥೈ ಥೈ ಕುಣಿತಾ ಬರುತಾನ
ಯಮ್ಮ ಉಧೋ ಅಂತ ಉದ್ಘಾಕುತಾನ
ಯಮ್ಮಾ ಹುಲಿಗಿಗೆ ಬಂದಾನೆ ಯಮ್ಮಾ ಪರಶುರಾಮಣ್ಣ
ತಕ್ ತಕ್ ದಿಗತ್ಯೆತಾ”[೭೭]

ಹುಲಿಗಿಯಲ್ಲಿ ಗಂಡು ಹೋಗಿ ಹೆಣ್ಣಾಗಿ ಉಧೋ ಅಂತ ಬರುತಾನೆ ಇದು ಪ್ರಸ್ತುತ ಸಂದರ್ಭದಲ್ಲೂ ಗಂಡು ಮಕ್ಕಳು ಜೋಗಮ್ಮಳಾಗಿ ತಮ್ಮ ವೇಶಭೂಷಣ ಬದಲಾಯಿಸಿಕೊಳ್ಳುವುದನ್ನು ತಿಳಿಯಬಹುದಾಗಿದೆ.

ಪರಶುರಾಮ ವೇಶಾಧಾರಿಯಾಗಿ ಮನೆ ಮನೆ ಹುಡುಕುತ್ತಾನೆ. ಯಾವ ಮನೆಯಲ್ಲೂ ರೇಣುಕೆ ಸಿಗುವುದಿಲ್ಲ. ಪ್ರಸ್ತುತ ಜೋಗಮ್ಮಳು ಮನೆ ಮನೆ ತಿರುಗುವುದನ್ನು ನೋಡಿದರೆ ಜನಪದರು ತಮ್ಮ ವೃತ್ತಿ ಕಸುಬಿಗೆ ತಕ್ಕಂತೆ ಕಾವ್ಯ ಕಟ್ಟಿ ಹಾಡುತ್ತಾರೆಂಬುದನ್ನು ಗಮನಿಸಬಹುದಾಗಿದೆ. ತಮಗೆ ಅನುಕೂಲ ಮತ್ತು ಸಮಾಜ ಒಪ್ಪಿತ ಸಂಪ್ರದಾಯಗಳಿಗೆ ಒಂದು ರೀತಿಯಾಗಿ ಕಥೆ ಕಟ್ಟುವುದು ಅವರ ಕಲ್ಪನೆ ಎಂಬುದನ್ನು ಊಹಿಸಲು ಸಾಧ್ಯವಾಗುತ್ತದೆ. ಉದಾರಹಣೆಗೆ ಈ ಜೋಗತಿ, ದೇವದಾಸಿ ಪದ್ಧತಿಗಳಿಗೆ ದೇವರ ಕಲ್ಪನೆ ಕೊಟ್ಟಿರುವುದು. ಒಂದು ರೀತಿಯಾಗಿ ಉಚ್ಚ ಸಮುದಾದವರ ಪರವಾಗಿ ನಿಲುವಾಗಿರುದೇನೋ ಅನಿಸುತ್ತದೆ. ಈ ಪದ್ಧತಿಗಳನ್ನು ಹುಟ್ಟು ಹಾಕಿ ಅವುಗಳ ದೇವರ ಹೆಸರಿನಲ್ಲಿ ಮುಗ್ಧ ಜನರನ್ನು ಅವುಗಳ ಮೂಲಕ ಬಳಸಿಕೊಳ್ಳುವಿಕೆಯನ್ನು ಅವರ ಅಸಹಾಯಕ ಸ್ಥಿತಿಯು ಒಂದು ರೀತಿಯ ಅಮಾನವೀಯತೆ ಎನಿಸುತ್ತದೆ. ಅವರು ಈ ಪದ್ಧತಿ ಗಳನ್ನು ಒಪ್ಪಿಕೊಳ್ಳುವಿಕೆ ಅವುಗಳ ಪರಿಪಾಲಿಸುವಿಕೆಯಂತೂ ಅಪಾರವಾದುದಾಗಿದೆ. ಇಂತಹ ಸಮುದಾಯಗಳು ಒಪ್ಪಿತವಾದ ನೀತಿ ಸಂಹಿತೆಯನ್ನು ಪರಿಪಾಲಿಸುತ್ತಿದ್ದಾರೆ.

ರೇಣುಕಾ ದೇವಿಯನ್ನು ಹುಡುಕುತ್ತಾ ಮಾದರ ಹರಳಯ್ಯನ ಮನೆಗೆ ಬಂದು ಅಲ್ಲಿ ಮಾರಕ್ಕನ ಮನೆಯಲ್ಲಿ ಬಂದು ಉಧೋ ಅಂಬೊ ಹೊತ್ತಿಗೆ ಅಯೆಯ್ಯೋ ಜೋಗಮ್ಮ ಈಗ ಒಂದು ಜೋಗಮ್ಮ ಮುದುಕಿ ಬಂದಿದ್ಳು ಇನ್ನೊಂದು ಜೋಗಮ್ಮ ಬಂದ್ಳೆ ಅಂತ ಅನ್ನುವಾಗ ಪರಶುರಾಮ ಜೋಗವ್ವನ ವೇಶದಾಗ ಹೌದ ನಮ್ಮ ಮುದುಕಿ ಬಂದಿದ್ಲಾ ಎಂದು ಕೇಳಲು ಊ ಅಡ್ಡಲ್ಗಿ ತಗಂಡು ಬಂದಿದ್ಳು ಮನೆಯಾಗ ಜಾಗ ಕೇಳಿದ್ಳು ನಾವು ಮ್ಯಾಗಳ ಮನೆಯಾಗ ಕಾಳು, ನಡುವಿನ ಮನ್ಯಾಗ ಅಡ್ಗಿ ಮಾಡೋದು, ಎಳಗಿನ ಮನೆಯಾಗ ದನ ಕೊಯ್ಯೋದು ನಾವು ಊರಿಗೆ ಮಾದರು ಎಂದು ಹೇಳುವಾಗ ಇಲ್ಲಿ ಒಪ್ಪಿತ ಸಾಮುದಾಯಿಕ ಸಂಪ್ರದಾಯಸ್ತರ ಮನಃಸ್ಥಿತಿ ಕಾಣಬಹುದಾಗಿದೆ. ತಮ್ಮ ತಮ್ಮ ಜಾತಿ ಸಮುದಾಯದ ಬಗ್ಗೆ ಅವರು ಒಪ್ಪಿಕೊಂಡು ಬಾಳುತ್ತಾರೆ ಎಂಬುದನ್ನು ತಿಳಿಯಬಹುದಾಗಿದೆ. ಎಲ್ಲಮ್ಮ ಪಕ್ಕದಲ್ಲಿ ಅಡ್ಡಲ್ಗಿ ಇಟ್ಟಿರುವುದನ್ನು ನೋಡುತ್ತಾನೆ.

"ಯಮ್ಮಾ ನಿನ್ನ ಹೊಟ್ಯಾಗ ಹುಟ್ಟಿದವ್ನು
ನಿನ್ನ ರಕ್ತಗುಟ್ಟಿದವ್ನು
ನಿನ್ನ ರಕ್ತ ಕುಡಿಯೋ ತನ್ಕ ಬಿಡೋದಿಲ್ಲ
ಇಗೋ ನಿನ್ನ ಹಿಡಿತಿನಂತ" [೭೮]

ಆಗ ಪರಶುರಾಮ ಜಗ ಇಳ್ಳಿ ಸೀರಿ ಬಿಚ್ಚಿ ಬೇವಿನಗಿಡಕ್ಕೆ ಬರಬರನೆ ಸುತ್ತಿದ, ಕುಬುಸ ಬಿಚ್ಚಿ ಉಡಿ ಕಟ್ಟಿದ, ಬಳೆ ತೆಗೆದು ಉಡಿಯಾಗ ಹಾಕಿದ. ಮುತ್ತು ತೆಗೆದು ಉಡಿಯಾಗ ಹಾಕಿ, ಜಡೆ ಸುತ್ತಿದ ಗಿಡಮ್ಯಾಲೆ ಒಗೆದ ಆ ಗಿಡಕ್ಕೆ ಶರಣು ಮಾಡಿದ ಗಳ್ಳಿ ಕುಣಿಗೆ ಕೈ ಮುಗುದು ಎಲ್ಲಮ್ಮನ ಹೊರ ಬರುವಂತೆ ಮಾಡುತ್ತಾನೆ. ಕಥನ ಕಾವ್ಯ ಮುಂದುವರೆಯುತ್ತಾ ಸಾಗುತ್ತದೆ.

ಪರಶುರಾಮನ ತಾಂಬೂಲೆಂಜಲಿಗೆ ಬಸುರಾದ ಮಾರೆಮ್ಮ ಕಥನ ಕಾವ್ಯ ಈ ಕೆಳಗಿನಂತೆ ವಿಶ್ಲೇಷಿಲಾಗಿದೆ.

"ತೊಗಲು ಕಿತ್ತೆಮ್ಮ ಮಗ ಗಡ್ಡಿಗಿ ಒಗಿತಾನ
ಏ.. ಬಂಡಿ ತೊಗಲಮ್ಮ ಕಿತ್ತಿ ಹೊರ್ಗೆ ಒಗದಾನ
ಗಡ್ಡಿಗ್ಹಾಕಿದ
ಮಗನೆ ಕಿತ್ತಿಂದಮಗಮ್ಮ ಇನ್ನ ಮಾಯಾ ಶಕಿ ನೋಡ
ಯಮ್ಮಾ ತೊಗಲು ಹುಟ್ಸಸ್ತಾಳಾ ದೇವಿ" [೬೯]

ಪರಶುರಾಮ ತನ್ನ ತಾಯಿಗ ಗಲ್ಲಿ ಕುಣಿಯಾಗ ತೊಗಲ ಮುಚ್ಕೊಂಡು ಇರೋದನ್ನ ನೋಡಿ ತೊಗಲು ಕಿತ್ತು ಒಗಿತಾನೆ. ಅದು ಮಹಾಭಾರತದ ದ್ರೌಪದಿಯ ವಸ್ತ್ರಾಪಹರಣ ಮಾಡುವ ದುರ್ಯೋದನ, ದುಶ್ಯಾಸನರು ಕೃಷ್ಣನ ಕೈಚಳಕದಿಂದಾಗಿ ಅದು ಸಾಧ್ಯಾವಾಗದ ರೀತಿಯಾಗಿ ಈ ಕಥನ ಕಾವ್ಯದಲ್ಲಿ ತೊಗಲು ಎಷ್ಟು ಕಿತ್ತು ಒಗೆದರೂ ಸಹ ಅದು ಪುನಃ ಪುನಃ ರೇಣುಕಾ ದೇವಿಯ ಶಕ್ತಿಯಿಂದ ಸೃಷ್ಟಿಯಾಗುತ್ತದೆ. ಆಗ ಹರಳಯ್ಯನ ಮಗಳು ಮಾರಕ್ಕ ನೋಡಿ ಇಂಥ ಸತ್ಯವಂತೆ ಈ ಗಳ್ಳಿ ಕುಣಿಯಾಗೆ ಇದಾಳ ಅಂತ ಆಶ್ಚರ್ಯದಿಂದ ಕೇಳಿದಾಗ ನಮ್ಮ ನಮ್ಮ ಸತ್ಯವಂತೆ ಅವಳು ಮಾಯಕಾರ್ತಿ ಅಂತೇಳಿ ಪರಶುರಾಮ ನೀರಡಿಕೆಯಾದರು ಸಹ ಹೋಗಲು ಯೋಚಿಸುತ್ತಾನೆ. ಆಗ ಮಾರಕ್ಕ ತುಂಬಿದ ಕೊಡ ಬಾವಿಯಿಂದ ತಂದೀನಿ ನೀರು ಕುಡಿರಿ ಎಂದಾಗ ನಾವು ನೀರು ಕುಡಿಯೋದಿಲ್ಲ ಛೀ ಛೀ ಛೀ ಹರಳಯ್ಯನ ಕೈಯಾಗ, ಉಂಬಂಗಿಲ್ಲ, ನೀರು ಕುಡಿಯಾಂಗಿಲ್ಲ. ನನ್ನ ಮೇಲೆ ಜೀವ ಇದ್ದರೆ ತುಂಬಿದೆಲೆ ತುಂಬಿದಡಿಕೆ ಕೊಡು ಅದರಾಗೇನು ಭೇದವಿಲ್ಲ ಎಂದಾಗಲೆ, ಅಡಿಕೆ, ಸುಣ್ಣ ಕೊಟ್ಟು. ಆಗ ಹೊಟ್ಯಾಗ ಹುಟ್ಟಿದ ಮಗನ್ಗೆ ಇಷ್ಟು ಕಾಡ್ಸಿಯಾ ನಮ್ಮಪ್ಪನಿಗೆ ಎಷ್ಟು ಗೋಳಾಡಿಸಿದ್ದೀಯೇ ನಮ್ಮಪ್ಪನ ಹೆಸರು ಹೇಳಂದ್ರ ಹೇಳಿಲ್ಲ, ತೋರಿಸೆಂದ್ರೆ ತೋರಿಸಿಲ್ಲ ಇಗೋ ನಿನ್ಗೆ ಭ್ರಷ್ಟ ಮಾತೀನಿ ಅಂತ ಎಲೆ ಅಡಿಕೆ ಅಗದೆ ನಿನ್ನ ಮ್ಯಾಲೆ ಉಗಳೇನು ಭ್ರಷ್ಟ ಮಾಡ್ತೀನಿ ತಂದಾನ ಎಂದು ಕಾವ್ಯ ಕಟ್ಟುತ್ತಾ ಹಾಡಿ ಕೇಳುಗರಿಗೆ ಮುದವೆನಿಸುವಂತೆ ಹಾಡುತ್ತಾರೆ.

ಪರಶುರಾಮ ಎಲೆ ಅಡಿಕೆ ತಾಂಬೂಲ ಉಗುಳುವಾಗ ಗಳ್ಳಿ ಕುಣಿಯ ಪಕ್ಕದಲ್ಲೇ ಕುಂತಿದ್ದ ಹರಳಯ್ಯನ ಮಗಳು ಮಾರಕ್ಕನ ಮೈಮೇಲೆ ಉಗುಳು ಬಿತ್ತು, ತಾಂಬೂಲ ಆಕಿಯ ಕೈಯಾಗ ಬಿದ್ದ ತಕ್ಷಣ ಹ್ಯಾಂಗ ಬಿಸಾಟಲಿ ಅಂತ ಯೋಚಿಸುತ್ತಾಳೆ.

"ನನ್ನ ಬಗಸ್ಯಾಗ ಬಿದ್ದಿದ್ದು
ಇದು ಎಲೆ ಅಡಿಕೆ
ತುಂಬಿದೆಲೆ ತುಂಬಿದಡಿಕೆ ಅಂತ
ಉಧೋ ಅಂದಾಳ ಆಕಿ ಗರ್ಭಕ್ಕೆ ಹಾಕ್ಯಾಳೆ ದೇವಿ
ಯಮ್ಮಾ ಎಲೆ ಅಡ್ಕಿಗೆ ಆಕಿ ಬಸ್ರೆ ಆಗ್ಯಾಳ" [೭೦]

ಹರಳಯ್ಯನ ಮಗಳು ಮಾರಕ್ಕ ಮಂಗಳವಾರ ದೇವಿವಾರ ಹುಟ್ಟಿದ್ದಾಳೆಂದು ಊರಿಗೆ ಮಾರೆಮ್ಮ ಅಂತ ಬಿಟ್ಟು ಬಿಟ್ಟಾರ ಆಕಿನ ಆಕಿ ಗಂಡಸರನ್ನೆ ನೋಡಿಲ್ಲ, ದುಷ್ಟರ್ನ್ನೇ ನೋಡಿಲ್ಲ. ಪಾಪ ಮಾಡಿಲ್ಲ ಗಂಡಸರ ಬಾಯಾಗಿನ ತಾಂಬೂಲು ತಿಂದಿದ್ರಿಗೆ ಬಸ್ರು ಆಗಿ ಬಿಟ್ಟಾಳ ಎಂದು ಕಾವ್ಯ ಕಟ್ಟಿದ್ದಾರೆ. ಇದು

ದೇವಿಯ ಹೆಸರಲ್ಲಿ ಬಸವಿಗೆ ಅಥವಾ ಜೋಗತಿಗೆ ಬಿಡುವುದನ್ನು ತೋರಿಸಿ ಕೊಡುತ್ತದೆ. ದೇವಿಯ ಹೆಸರಲ್ಲಿ ದಲಿತರ ಮೇಲಿನ ಅನಿಷ್ಟ ಪದ್ಧತಿಗಳು ಸಹ ಈ ಸಂದರ್ಭದ ಮೂಲಕ ತಿಳಿಯಬಹುದಾಗಿದೆ.

ಕಾವ್ಯವು ಮುಂದುವರೆದು ಮಾರೆಕ್ಕಳೊಂದಿಗೆ ಪರಶುರಾಮನ ಮದುವೆ ಮತ್ತು ಚೌಡಿಕೆ ರಾಮನ ಜನನ ಕುರಿತಾದ ನಿರೂಪಣೆ ಈ ರೀತಿಯಾಗಿದೆ.

"ಮಾರೆಕ್ಕ ಬಸುರ ಆದ ಹೊತ್ತಿಗೆ
ಈ ಗಳ್ಳಿ ಕುಣ್ಯಾಗಿರೋ ಎಲ್ಲಮ್ಮ
ಕ್ಯಂವ್ ನೆಮದಾಳೆ ಕ್ಯಾಕಿ ಹೊಡೆದಾಳೆ
ಗಡ್ಡಿಗೆ ಹಾರ್‍ಯಾಳೆ ಎಲ್ಲಮ್ಮ" ೮೧

ಗಳ್ಳಿ ಕುಣ್ಯಾಗಿರೋ ಎಲ್ಲಮ್ಮಗೆ ಭ್ರಷ್ಟ ಮಾಡುವಾಗ ಕೋಪಗೊಂಡು ಎಲ್ಲಮ್ಮ ದುಷ್ಟರ ತಾಯಿಗೆ ಭ್ರಷ್ಟ ಮಾಡ್ತಿರಾ ಅಂತ ತಾಯಿ ಮೊಲೆ ಹಾಲು ಕುಡಿದು ನನ್ಗೆ ತಾಂಬೂಲ ಉಗಳ್ತೀರಾ ಅಂತಾಳೆ. ಆಗ ಹರಳಯ್ಯನ ಮಗಳು ಮಾರಕ್ಕ ಗಂಡನ ಹೆಸರು, ನಿನ್ ತಂದೆಯ ಯಾಕ ತೋರಿಸೋದಿಲ್ಲಂತ ನಾನೇ ನನ್ನ ಗಂಡನ ತೋರಿಸ್ತೀನಿ ಎಂದಾಗ ಮಾರಕ್ಕ ಇಲ್ಲಮ್ಮ ನಮ್ಮಪ್ಪಾ ನಮ್ಮಮ್ಮಗೆ ಹತ್ತು ಮಕ್ಕಳು ಹುಟ್ಟಿ ಸತ್ತೋಗೇವೆ. ಮಂಗಳವಾರ ನಾನು ಹುಟ್ಟೀನಿ. ಉರಿಗೆ ಮಾರೆಮ್ಮ ಅಂತ ಬಿಟ್ಟಾರ ನನ್ಗೆ ಮದುವೆ ಇಲ್ಲ ಭೂಮಜ್ಜ, ನಾಬು ದುಷ್ಟರ ನೋಡಿಲ್ಲ, ಕರ್ಮ ನೋಡಿಲ್ಲ. ಮನೆಯಿಂದ ಹೊರಗೆ ಬಂದಿಲ್ಲ ಹಾಗಾದರೆ ಕರ್ಮ ಮಾಡದೇ ಯಾಂಗ ಗರ್ಭಧರಿಸಿದೆ ಎಂದಾಗ

"ಸರೆ
ಮದುವಿ ಇಲ್ದೆ ಹ್ಯಾಗ ಬಸುರಾದಿ ನೀನು
ಏನ್ರಿ ನಿನ್ನ ಪಾದಾಜ್ಞೆ
ಎಲೆ ಅಡಿಕೆ ನಿನ್ನ ಬಾಯಾಗಲಿದ್ದ
ನನ್ನ ಕೈಯಾಗ ಬಿದ್ರೆ
ಆಗ ಕೈಯಾಗ ಬಿದ್ದಿದ್ದು ಬಿಸ್ಹಾಕಬಾರದಂತ
ನಾನು ಗರ್ಭಕ್ಕ ಹಾಕಿನಿ
ಎಲೆ ಅಡಕಿಗೆ ನಾನು ಬಸುರೆ ಆಗಿನಿ" ೮೨

ಎಂದು ಒಪ್ಪಿಕೊಳ್ಳುತ್ತಾಳೆ. ಆಗ ಪರಶುರಾಮ ಎಲೆ ಅಡಿಕೆ ಕೊಟ್ಟಿದ್ದೇನು ಕರೆ ಅದಕ್ಕ ಬಸುರಾಗಿನಿ ಅಂತೀಯ ಈಗ ಬೇನ ಗಿಡದ ಕೆಳಗೆ ಹಂದ್ರ ಹಾಕಿ ಅಲ್ಲೇ ತಾಳಿ ಕಟ್ಟೋದು ಅಂತ ಕರೆ ಕಂಬ್ಳಿ ಹಾಸಿದ ಅರಿಶಿಣ ದಾರಗೆ ತಾಳಿ ಪೋಣ್ಸಿದ. ಬೆಳ್ಳಿದು ಕೈ ತೊಗಲು ಪಾದ ತಾಳಿಗೆ ಜೋಡ್ಸಿದ, ಹಾಲದ ಮಣಿ ಬಿಳಿ ಮಣಿ ಪೋಣ್ಸಿದ, ಹಾಲದ ಕಡಗ ಮೂಗು ಮುತ್ತು ಮಾಡಿದಾಗ ಯಪ್ಪಾ ದೇವ್ರಿಗೆ ದಿಂಡ್ರಿಗೆ ಏರಲಾರದ್ಹಂಗ ಮಾಡಿಬಿಟ್ಟಿ ನನ್ನ ಮಗಳ್ನ ಅದ್ವಾನ ಮಾಡಿಬಿಟ್ಟಿ ಅಂದಾಗ ಮೊದಲು ದೇವರ ಪೂಜೆ ನಂತರ ನಿನ್ನ ಮಗಳ ಪೂಜೆ ಮುಂದೆ ಅಂತ ಹೇಳುತ್ತಾ ಉದ್ಧೋ ಎನ್ನಾರ್‍ಪ ದೇವ್ರ ಮಾಡಂಗಿಲ್ಲ.

ಅಡ್ಡಲ್ಗಿ ಇಲ್ಲದೇ ಕುಂಭ ಹೊರಾಂಗಿಲ್ಲ ನಿನ್ನ ಮಗಳು ಮುಂದೆ ದೇವ್ರು ಹಿಂದಯ್ಯ ನಾನು ಲೋಕ ಮಾಡೋನು ನಾನು ಲೋಕ ಪರಶುರಾಮ ಎಂದು ಹೇಳುವನು.

ಪರಶುರಾಮ ಹೇಳಿದಂತೆ ಸರಿಯಂತ ಹೇಳಿ ಅವನ ಪಾದಕ್ಕೆ ಶರಣೆಂದು ಕರೆಯಕಂಬ್ಳಿ ಮ್ಯಾಲೆ ಕುಂದ್ರಿಸಿ ಸೂಸುಗ ಹಾಕಿ ಟಡ್ಡಲ್ಗಿ ಇಟ್ಟು ಏನ್ಮಾಡಿದ ಅಂದ್ರೆ

"ಉಧೋ ಅಂದಾನಾ ಯಮ್ಮಾ ತಾಳಿ ಕಟ್ಯಾನ
ಉಧೋ
ಯಮ್ಮಾ ಜೋಗೆಮ್ಮಾಗೆಮ್ಮ ನೀನು ಲೋಕ ನಿಂತೆಮ್ಮ
ಊರಿಗೆ ಜೋಗಮ್ಮ ನೀನು ದೇವ್ರಿಗೆ ಮಾರೆಕ್ಕ" ೮೩

ಎಂದು ನಿನ್ಗೆ ಗಂಡಿಲ್ಲ, ಗಂಡಸರ ಜೋಡಿಲ್ಲ ನಿನ್ಗೆ ಇದೇ ಜೋಡು ಎಂದು ಟಡ್ಡಲ್ಗಿ ಜೊತೆ ಎಲೆ ಅಡಿಕೆ ತಾಂಬೂಲ ಎಂದು ಹೇಳುತ್ತಾನೆ. ಆಗ ಹುಟ್ಟುವ ಮಗನಿಗೆ ಚೌಡಿಕೆಯ ರಾಮ ಎಂದು ಹೆಸರಿಡಮ್ಮ ಎಂದಾಗ ಒಪ್ಪಿಕೊಳ್ಳುತ್ತಾರೆ.

**ಕಪ್ಪೆಯಾದ ಎಲ್ಲಮ್ಮ ಒಡ್ಡನಾದ ಪರಶುರಾಮ**

ಮಾರೆಕ್ಕ ತನ್ನ ಗಂಡನ ತೋರಿಸಿದ ನಂತರ ಪರಶುರಾಮ ನನ್ನ ತಂದೆಯ ತೋರಿಸೆಂದು ಕೇಳುತ್ತಾನೆ. ಆಗ ಎಲ್ಲಮ್ಮ ಹೀಗೆ ಹೇಳುತ್ತಾಳೆ. ನಾನು ಜೋಗಮ್ಮ ನಾನು ಮದ್ವೆಯಾಗಿಲ್ಲ ಬಂಜೆಯಾಗಿಲ್ಲ ಅಂತ ಹೇಳುತ್ತಾಳೆ. ನನ್ನ ಜೀವದ ಮಗ ಜೀವ ಉಳಿಸ್ತಾನ ಅಂತ ಜೋಪಾನ ಮಾಡ್ದೆ, ಜೀವ ಕಳಿವಂತ ಮಗ ನನ್ಗೆ ಬೇಡಮ್ಮಾ ಅಂತ ಹೇಳುವಾಗ ಪರಶುರಾಮ ನಾನು ರಕ್ತಕ್ಕೆ ಹುಟ್ಟಿದವ್ನು ನಿನ್ನ ರಕ್ತ ಕುಡಿಯೋತನಕ ಬಿಡಲ್ಲ. ನನ್ನ ತಂದೆಯ ತೋರಿಸ್ತೀಯಾ ತೋರಿಸು ಇಲ್ಲ ಹೆಸರ ಹೇಳ್ತೀಯಾ ಹೇಳು ಕಿವಿಲಿ ಕೇಳ್ತೀನಿ ಅದ್ಲು. ನನ್ಗೆ ನಿನ್ನ ತಂದೆ ಯಾರು ಎಂದು ಕೇಳ್ತಾರೆ. ತಂದಿಲ್ದ ಹುಟ್ಟಿದಾವ್ನು ಅಂತಾರೆ ಆಗ ಅಯ್ಯೋ ಪರಮಾತ್ಮ ಅಂತ ಉಧೋ ಅಂತ ಜಗಪುಟ್ಟಿ ತಲಿಮ್ಯಾಲೆಟ್ಟಾಳೆ ದೇವಿ ಓಡಿ ಬರುತ್ತಾಳೆ. ಪರಶುರಾಮ ನೀನು ಲೋಕದ ಸತ್ಯಳು ಓಡಿ ಬಂದ್ರೆ ಮಾಯಾವಾಗ್ತಿ ಮುಂದೆ ನಡಿ ಎಂದು ಕಣ್ಣಿಗೆ ಎದುರಾಗಿ ಕಾಣಬೇಕು ನೀನು ಮುಂದೆ ಹುಟ್ಟಿರೋಳು, ನಾನು ಹಿಂದೆ ಹುಟ್ಟಿದೋನು ಎಂದು ಹಿಂದೆ ಬರುತ್ತಾನೆ. ಆಗ ಮಗನ್ನ ಹೆಂಗೆ ತಪ್ಪಿಸಬೇಕು ಎಂದು ಯೋಚಿಸಿ ಹುಲಿಗಿಯಲ್ಲಿ ಹಳ್ಳ ಹತ್ತಿರ ಬರುತ್ತಿದ್ದ ಹಾಗೆಯೇ ಅಪ್ಪಾ ಪರಸುರಾಮ ನೀರಡಿಕೆ ಆಗೈತಿ ನೀನು ಮುಂದೆ ನಡಿ ಎಂದು ಹೇಳುದಾಗ ಪರಶುರಾಮ ಹಾಗೆ ಮಾಡುತ್ತಾನೆ. ಎಲ್ಲಮ್ಮ ಹಳ್ಳದಲ್ಲಿ ಹಾರಿ

"ಮಣ್ಸೆನ ದಪ್ಪಮ್ಮ ಯಮ್ಮ ಕಪ್ಪೆ ಆಗ್ಯಾಳ
ಯಮ್ಮಾ ಅಗಸರ ಬಂಡೆಮ್ಮ ಆಡೇಲಿಕುಂತೆ ಬಿಟ್ಯಾಳ
ಮಡೆಲೋರ ಬಂಡಿ ಆಡೇಲಿ" ೮೪

ಕಪ್ಪೆಯಾಗಿ ದೇವಿ ದೊಡ್ಡ ಬಂಡೆ ಕೆಳಗೆ ತೂರಿ ಬಚ್ಚಿಟ್ಕೊಳ್ಳುತ್ತಾಳೆ. ಮಗ ಗಡ್ಡೇರಿ ನೋಡಿದ ಎಲ್ಲಮ್ಮಿಲ್ಲ ಜಗಯೊಂದೈತಿ ಆಗ ಕನ್ನಡಿ ಒಡಿದು ನೋಡಿದ್ರೆ ಕಪ್ಪೆಯಾದ ದೇವಿನ ನೋಡಿದ ಆ ಕಪ್ಪೆ

ಹಿಡಿಯಲೆಂದು ಪರಶುರಾಮ ವಡ್ಡರ ಮಗನಾಗಿ ಹುಲಿಗ್ಯಾಗೆ ಓಡಿ ಬಂದು ಬಿಟ್ಟ. ಅಲ್ಲಿ ನಮ್ಮಮ್ಮ ಹಳ್ಳದಾಗ ಸಾಯಿತಾಳ ಬರ್‍ರ್ಯೋ ಅಮತ ಅಗಸರು, ಮಡೆಲೋರ ಬರ್‍ರಿ ನಮ್ಮಮ್ಮನ ಮೇಲೆ ಬಂಡಿ ಬಿದ್ದೈತಿ ಎಂದು ಕರೆದಾಗ ಓಡಿ ಓಡಿ ಬರುತ್ತಾರೆ ಗಡಾರಿ, ತೋಥಡಿ ತಗಂಡು ಎಬ್ಬಿಸ್ತಾರೆ ಗಡಾರಿ ಮುರಿತಾವ ಬಂಡಿ ಎದ್ದೇಳವಲ್ದು ಬೇಸರವಾಗಿ ಕಬ್ಬೀಣದ ಗಡಾರಿ ತಗಂಡು, ಕಬ್ಬಿಣ ಸುತ್ತಗಿ ತಕ್ಕೊಂಡು ವಡ್ಡರ ಮಗನಾಗಿ ಬಂಡಿ ಒಡೆದಾಗಿ ನಾಲ್ಕು ಹೋಳಾತು ಬಂಡೆ. ನೀನು ಅಗಸರ ಬಂಡೆಮ್ಮ ಎಂದು ಹೇಳುವಾಗ ಹೆದರಿದ ಎಲ್ಲಮ್ಮ ನಿರ್‍ದ್ಧಾಗ ಹಳ್ಳದಲ್ಲಿ ಕಪ್ಪೆಯಾಗಿ ಗಡ್ಡಿಗೆ ಎಗರಿದಳು. ನಂತರ ಕೋಣವಾಗಿ ಊರಿಗೆ ನಿಂತಾಳೆ ಗೌಡ್ತ ಹೊಲ್ದಾಗೆ ನಿಂತಾಳೆ ಗಡಾರಿ ಎಬ್ಬಿಸಿ ನೋಡಿದರೆ ಎಲ್ಲಮ್ಮಿಲ್ಲ. ಕನ್ನಡಿ ಹಿಡಿದು ನೊಡಿದರೆ ಕ್ವಾಣವಾಗಿದ್ದಾಳೆ. ಗೌಡ್ರು ದೊಡ್ಡ್ಯಾಗ ನಿಂತಾಳಾಗ ಮೀನಗಸಿ ಮುಂದೆ ಗುಡಿ ಕಟ್ಟಿಸಿದರು.

**ಕ್ವಾಣನ (ಎಲ್ಲಮ್ಮನ) ಬಲಿ ಕಾರ್ಯ**

ಎಲ್ಲಮ್ಮು ಪರಶುರಾಮನಿಂದ ತಪ್ಪಿಸಿಕೊಳ್ಳುವ ಸಲುವಾಗಿ ಕ್ವಾಣನಾಗಿ ಗೌಡ್ರ ಹೊಲದ ಓರಗಲ್ಲಾಗ ನಿಂತುಕೊಂಡಿರುವುದನ್ನು ನೋಡಿದ ಪರಶೂರಾಮ ಈ ಕ್ವಾಣ ಕಡಿಯೋರು ಯಾರು? ಈ ಊರಿಗೆ ಮುಖ್ಯಸ್ಥರು ಯಾರು? ಅಂತ ಯೋಚಿಸಿದ. ಯೋಚಿಸಿ ಬೇವಿನ ತಪ್ಲ ಸೀರೆ ಉಟ್ಕೊಂಡು ಬೇನ ತಪ್ಲ ಕುಬುಸ ತೊಟ್ಕೊಂಡು ಗಿಡಮ್ಯಾಲ ಗುಬ್ಬಿ ಹಿಡ್ಕೊಮಡು ಮೂಗುತಿ ಮಾಡಿಕ್ಯಂಡ ಕರೆ ಕೈ ಬಳೆ ಮಾಡ್ಕೊಂಡು ಗಂಡು ಹೋಗಿ ಹೆಣ್ಣಾಗಿ, ಹೆಣ್ಣು ಮಕ್ಕಳು ಬಾಯಿಗೆ ಮಣ್ಣಾಕ್ತೀನಿ ಅಂತ ಉಧೋ ಅಂತ ಜಗಪುಟ್ಟಿ ತಲೆಮ್ಯಾಲೆ ಹೊತ್ಕೊಂಡು ಥೈ ಥೈ ಕುಣಿತಾ ಗೌಡ್ರ ಮನಿಗೆ ಬರುತ್ತಾನೆ. ಆಗ ಗೌಡರ ಮನೆಯ ಹೊಸ್ತಿಲ ಮೇಳೆ ಜಗ ಇಳ್ಸಿದ ಲಿಂಗನಗೌಡ ನೋಡಿ ಸುಡುಗಾಡ ಬುಟ್ಟಿ ತಂದು ಬಾಕಿಲಿಗೆ ಇಟ್ಟಿಯ ಮನೆಗೆ ಹೆಣ್ಮಕ್ಕಳು ಹುಡುಗ್ರು ಇದಾರೆ ಎಂದು ಹಂಗಿಸುತ್ತಾನೆ. ಪರಶುರಾಮ ಈ ಪುಟ್ಯಾಗ ನಿನ್ನ ಸುಡುಗಾಡಿಗೆ ಒಯ್ಯೋದು ಹೆಣ್ಕ ಹಾಕೋ ನಿಂಬೆಕಾಯಿ ಪಂಬೇಕಾಯಿ ಇದಾವ ಈ ಜಗಪುಟ್ಯಾಗ ನೀನೇ ಇದನ ಎಲ್ಲೇನ ಇಡಪ್ಪ ನಾನು ಮುಟ್ಟಾಗಿಲ್ಲ ಎಂದಾಗ ಏ.. ಹುಡುಗ ನಿನ್ನ ಹೆಸರೇನು ಎಂದು ಲಿಂಗನಗೌಡ ಕೇಳಲು ಪರಶುರಾಮ ನನ್ಹೆಸರು ಹುಲಗಿ ಪರಶುರಾಮ. ಈ ಸಂದರ್ಭದಲ್ಲಿ ಈ ರೀತಿಯ ಕ್ವಾಣ ಬಲಿಗೆ ಸಂಬಂಧಿಸಿದ ಕಥೆ ಬರುತ್ತದೆ. ಲಿಂಗನಗೌಡರ ಪ್ರಶ್ನೆಗೆ ಉತ್ತರವಾಗಿ

"ಇದು ಎತ್ತಂಗಿಲ್ಲ
ನಾವು ಮುಟ್ಟಂಗಿಲ್ಲ
ಮತ್ತೇ ನಮ್ಮೂರಾಗ
ವರ್ಷಿಗೊಂದಸರ್ತಿ
ಬ್ಯಾಟೆ ಕಡಿತೀವಿ
ವರ್ಷಗೊಂದ ಸರ್ತಿ
ಕ್ವಾಣ ಕಡಿತೀವಿ
ನಮ್ಮೂರ ಕ್ವಾಣ ನಿನ್ನ ಗದ್ದ್ಯಾಗೈತಿ
ನಮ್ಮ ದೇವಿ ಬಂದು ನಿನ್ನ ಮನಿಗಿ ಕುಂತೈತಿ" [೮೫]

ಲಿಂಗನಗೌಡ್ರು ನನ್ನ ಗದ್ದೆ ಹಾಳಾಗಿ ಹೋಗಿದೆ. ನಿನ್ನ ಕ್ವಾಣ ಹಿಡ್ಕೊಂಡು ಹೋಗು ಎಂದಾಗ ಊರಿಗೆ ಬಂದ ಬಿಡಬಾರ್ದು ಅಂತ ನಾವು ಮೀನಿನಿಂದ ಮೀನಗ್ಗಿ ಕಟ್ಟೀವಿ, ಗುಡಿ ಕಟ್ಟಿವಿ ಊರಿಗೆ ಬಂದ ಕ್ವಾಣ ಏನ ಮಾಡಬೇಕು ಎಂಬ ಪ್ರಶ್ನೆಗೆ ಅಗ್ಗಿ ಮುಂದೆ ನಾವು ಕಡಿಬೇಕು. ಉರ ಕಲ್ತು ಊರ ದ್ಯಾವರು ಮಾಡೋಣ ಎಂದು ಯೋಚಿಸುವ ಪರಿಯಂತೂ ಪ್ರಸ್ತುತವಾಗಿ ಊರ ಜಾತ್ರೆ, ದೇವಿಯ ಜಾತ್ರೆಗಳು ಸಹ ಪೌರಾಣಿಕವಾದ ಕಥೆಗಳಿಂದ ಈ ಕ್ವಾಣ ಬಲಿ ಪದ್ಧತಿಯು ರೂಢಿಯಲ್ಲಿದೆ.

ಕ್ವಾಣ ಬಲಿಯು ಪೌರಾಣಿಕದ ಕೆಲವು ಕಥೆಗಳಲ್ಲಿ ದೇವಿಯ ಮದುವೆಯಾದ ಗಂಡನ ಸಂಕೇತವಾಗಿದೆ ಎಂದು ಹೇಳಿದರೆ ಇದು ಕೆಳಸ್ತರದ ವ್ಯಕ್ತಿ ಮೇಲಸ್ಥರದ ಮಹಿಳೆ ವಿವಾಹವಾದ ಕಾರಣ ಅದು ಕ್ವಾಣನ ಸಂಕೇತವಾಗಿ ಗಂಡನ ಜೀವದ ಸಂಕೇತವಾಗಿಕ್ವಾಣನ ಬಲಿ ನಡೆದರೆ ಇನ್ನು ಕೆಲವು ಕಥೆಗಳಲ್ಲಿ ಈ ಎಲ್ಲಮ್ಮನ ಕಥನದಲ್ಲಿ ಎಲ್ಲಮ್ಮ ಪರಶುರಾಮನಿಂದ ತಪ್ಪಿಸಿಕೊಳ್ಳುವ ಸಲುವಾಗಿ ಕ್ವಾಣವಾಗಿದ್ದರ ಸಂಕೇತ ಅದರ ಬಲಿಕಾಯ್ ನಡೆಯಲು ಆದೇಶಿಸಲಾಗುತ್ತದೆ.

ಈ ಲೊಕ ದುಷ್ಟ, ದುರ್ಮಾಗ್ರು, ಕರ್ಮಿರು ಹೆಣ್ಣು ಗಂಡು ಹ್ಯಾಂಗ ನೋಡಬೇಕು ಪಾಪ ಹ್ಯಾಂಗ ಕಳಿಬೇಕು. ಆಗ ಲೋಕಕೆಲ್ಲ ಹ್ಯಾಂಗ ತಿಳಿಬೇಕು. ಕ್ವಾಣ ಕಡಿದರೆ ಲೋಕೆಲ್ಲ ಕಲಿತಾರ ನನ್ನ ಮಾತು ಯಾರ ಕೇಳ್ತಾರಪ್ಪ ಎಂದು ಲಿಂಗನಗೌಡ ಕೇಳುತ್ತಾನೆ. ಊರಲ್ಲಿ ನನ್ನ ಮಾತು ಯಾರೂ ಕೇಳಲ್ಲ ನೀನೆ ಹೇಳು ಕೇಳ್ತಾರೆ. ಆಗ ಹೇಳಿದ್ದಕ್ಕೆ ನಾಳೆ ಮಂಗಳವಾರ ಕ್ವಾಣ ಕಡಿಬೇಕು ಎಂದಾಗ ಮನೆಗಳೆಲ್ಲಾ ಸಾರ್ಸಿ, ಕಾಯಿ ಕರ್ಪೂರ ತಗೊಂಡು ಯಾರು ಹೊಲಗಳಿಗೆ ಹೋಗದೆ ಕ್ವಾಣ ಹಿಡಿಯಲು ಹಂದಿ ಬಲೆ ಸೇದ ಹಗ್ಗ ತಗೊಂಡು ಹೊಲಗೇರಿಯವ್ರು, ನಾಯಕರು ತಪ್ಡಿ ತಗೊಂಡು ಹೊರಟರು. ಆಗ ಅವರು ಹೊರಟ ಸಂಭ್ರಮದ ವರ್ತನೆಗಳು ಈ ರೀತಿಯಾಗಿವೆ.

"ಆಗ ಕಣಕಣ ಕಣಕಣ ತಪ್ಡಿಲಿ ಹೊಡಿತಾರ
ಏ.. ಕ್ಯಂವನ್ಹಂಗೆ ಕ್ಯಾಕ ಹೊಡಿತಾರೆ
ಏ.. ಮುನ್ನೂರ ಮಂದೆಮ್ಮ ಊರಾಗೆದ್ದೆ ಬಿಟ್ವಾರ
ಓರಗಲ್ಲಿನಾಗ
ಏ.. ಗೌಡ್ರ ಗದ್ದಿಗೆ ಕ್ವಾಣ ಇನ್ನ ಐತಮ್ಮ
ಕ್ವಾಣ ಹಿಡಿಲಿಕ್ಕೆ ಬರ್ತಾರ" [೮೭]

ಪ್ರಸ್ತುತ ಜಾತ್ರೆಗಳು ಊರಿನಲ್ಲಿ ನಡೆಯುವಾಗ ಈ ತರಹದ ಉತ್ಸವ ತಡೆಯುತ್ತದೆ. ಆಗ ತಾಯಿ ತಲೆ ಎತ್ತಿ ನೋಡಿ ಇನ್ನ ನನ್ನ ಮಗ ನನ್ನ ಉಲಿಸೋದಿಲ್ಲ ಅಂತೇಳಿ ನನ್ನ ಕಡಿತಾನ ಎಂದು ಯೋಚಿಸುತ್ತಾ, ದುಃಖ ಮಾಡ್ತಾ, ಶೋಕ ಮಾಡ್ತಾ ಇರುವಾಗ ಹಗ್ಗ ಒಗ್ದು ಬಲಿ ಬಿಟ್ಟು ಕ್ವಾಣ ಒಡಿತಾರೆ, ಕ್ವಾಣಾನ ಬಡಿತಾರೆ, ಎಲುಬೇ ಇಲ್ದಂಗ ಮಾಡ್ತಾರೆ. ಕ್ವಾಣ ಮೆತ್ತಗಾಗಿ, ಎಲುಬು ಮುರಿದು, ತಾಯಿ ನಡುಗುತಾತಮ್ಮ, ಕ್ವಾಣ ಒಡ್ಕೊಂಡು ಬಂದು ಊರ ಅಗ್ಗಿ ಮುಂದೆ ಬೇವಿನ ಅಗ್ಗಿಗೆ ಕಟ್ತಾರೆ. ಮನಿಗೊಂದು ಕುಂಭ ಹೊತ್ತಿ ಬಿಟ್ಟು ಮಾದರ ಹರಳಯ್ಯನ ಮಗಳು ಜೋಡ ಅಡ್ಡಲ್ಗಿ ತರಬೇಕು. ಹರಳಯ್ಯನ ಮೊಮ್ಮಗ ಚೌಡಿಕೆ ರಾಮಯ್ಯ ತುಂಬಿದ ಕೊಡ ತಣ್ಣೀರು ತಂದಾನ ಜಿಳೆ ಸೀರೆ ಜಿಳೆ

ಕುಬುಸ ಸುಸುಗ್ಗಾಪ್ಯಮಡು ಜೋಡು ಅಡ್ಡಲ್ಗಿ ಹಿಡ್ಕೊಂಡು ಉಧೋ ಅಂತ ಡೊಳ್ಳು ಹೊಡಿತಾ ಥೈ ಥೈ ಕುಣಿತಾ ಕುಂಭ ಹೊತ್ತು, ಕುಂಭ ಮೇಳ ಮಾಡ್ತಾ, ಕಳಸ ಹಿಡ್ದು ಮ್ಯಾಸ ಸಮೇತ ಪರಶುರಾಮ ಜಗ ಹೊತ್ಕೊಂಡು ಬಂದು ಅಗಸಿ ಮುಂದೆ ಇಳ್ಸಿದರು. ಆಗ ಕ್ವಾಣಗೆ ಒಂದು ಕೊಡಪಾನ ತುಪ್ಪ, ಒಂದು ಕೊಡಪಾನ ಹಾಲು ಹಾಕಿ ಮೈ ತೊಳೆದರು. ಐದು ಕೊಡ ನೀರಾಕಿ ಅರಿಶೀಣ ಭಂಡಾರ ಹಚ್ಚಿ ಕಾಯಿ ಹೂವ್ವಾ ಹಾಕಿ ಕ್ವಾಣ ಕಾಣಲಾರ್ದಂಗ ಹೋವ್ವಾಕಿದ್ರು ಆಗ ಕ್ವಾಣಕ್ಕೆ

"ಆನಂದಾಗ್ಯತೋ ಕ್ವಾಣ ಕಿಲಕಿಲ ನಗತ್ಯೆತೋ
ನನ್ಗೆ ಏನು ಬೇಕಿಲ್ಲ ಜನುಮಗ ಹೂವ್ವಾ ಬೇಕಮ್ಮ
ನನ್ಗೆ ಲೋಕ ಬೇಕಿಲ್ಲ ನನ್ಗೆ ಹೂವ್ವಾ ಸಂತೋಷ
ನನ್ಗೆ ಹೂವ್ವೆ ಆನಂದ ಜೀವಕ
ಆಗ ಕಿಲಕಿಲ ನಗುತ್ಯೆತೋ ಕ್ವಾಣಕ ಆನಂದಾಗ್ಯೆತೋ
ಆಗ ಓರಗಲ್ಲಾಗ" [೮೭]

ಎಲ್ಲಮ್ಮ ಕ್ವಾಣದಾಗ ಊರಿನ ಅಗಸಿಗಿ ಕಟ್ಟೀವಿ ನಿನ್ನ ಕಡೆ ಬಿಡ್ತಿನಿ ದೇವಿ ಎಂದು ದಡೆವು ಕೊಡ್ಲಿಯೆಮ್ಮ ಮ್ಯಾಕ ಎತ್ತೆ ಬಿಟ್ಟಾನ ಪರಶುರಾಮ. ಆಗ ದೇವಿ ಗಡ ಗಡ ನಡುಗಿ ಉಳಿಸೋದಿಲ್ಲಂತ ಉಧೋ ಅಂದು ಭಗ್‌ನೆ ಊರದಾಳೆ ದೇವಿ ಜೊಗಮ್ಮಾಗಿ ಬಾಗಿ ನಿಂತಾಳೆ ಉಧೋ ಎಂದು ತಾಯಿ ಆದಿಶಕ್ತಿಯಮ್ಮ ಆಗಿ ನಿಂತಾಳೆ. ಇಪ್ಪತ್ತಾರೆ ದಡೆವು ಹೂವ್ವಾ ಕೊಳ್ಳಾಗ್ಯೆತಮ್ಮ ದೇವಿಗೆ ಆಗ ಹುಲಿಗಿಯಲ್ಲಿ ಎಲ್ಲಾರು ಗಡಗಡ ನಡುಗಿದರು. ನಮಗೆ ತಿಳಿಲಾರ್ದೆ ಹೀಗೆ ಮಾಡೇವಿ ತಪ್ಪು ಆಯಿತಮ್ಮ ಎನ್ನುವಾಗ ದೇವಿ ದುಷ್ಟ ಊರೆಲ್ಲಾ ಕಲ್ತು ನನ್ನ ಕಡ್ಯಾಕ ನಿಂತಿರಾ ಹುಲಿಗಿಲಿ ನನ್ನ ಕರೆ ಕ್ವಾಣ ಅಂತ ತಿಳಿದಿರಾ ನಾನು ಕರೆ ಹುಲಿಗೆವ್ವಾ ಎಂದೆನ್ನುತ್ತಾಳೆ. ಹುಲಿಗೆಯ ದೇವಸ್ಥಾನದ ದೇವರ ಬಗ್ಗೆ ಹೇಳುವಾಗ ಬಲಕಿರೋದು ನಾಣು ಬಣ್ಣದ ಎಲ್ಲಮ್ಮ ಬಣ್ಣದ ಮಾರಮ್ಮ ಎಡಕಿರೋದು ನಾನು ಕರೆ ಕ್ವಾಣಮ್ಮ ಕರೆ ಸುಂಕ್ಲಮ್ಮ. ಶುಕ್ರವಾರ ಸುಂಕಲಮ್ಮಗ ಪೂಜೆ ಮಂಗಳವಾರ ಬಣ್ಣದ ಮಾರೆಮ್ಮಗೆ ವಾರ ಎಂದು ಏಳುತಲೆ ಪೂಜೆ ಮಾಡಬೇಕು. ನಾವು ತಿಳಿದೆನೆ ತಪ್ಪು ಮಾಡಿಬಿಟ್ವಿ ಮಕ್ಕಳೆಂದು ತಿಳಿದು ಕಾಪಾಡು ತಾಯಿ ನೀನು ಕರೆ ಕ್ವಾಣ ಅಲ್ಲ ಕರೆ ಸುಮಕ್ಲಮ್ಮ ಶುಕ್ರವಾರ ನಿನ್ನ ಪೂಜೆ ಎಂದು ಪ್ರತಿ ವರ್ಷ ಕುಂಭ ಹೊತ್ತೀವಿ, ಪ್ರತಿ ವರ್ಷ ನಿನ್ಗೆ ಕ್ವಾಣ ಕಡಿತೀವಿ ಬಡವರ ಹೆಣ್ಣು ಗಂಡು ಶರಣು ಮಾಡ್ತಿವಿ ಹೀಗೆ ನಡ್ಕೋತೀವಿ. ನಿನ್ನ ಜಾತ್ರೆ ಮಾಡ್ತಿವಿ ಎಂದು ಪ್ರತೀ ವರ್ಷ ಇದೇ ರೀತಿ ಈಗಲು ನಡೆಯುತ್ತಾ ಸಾಗಿರುವುದನ್ನು ನೋಡಬಹುದಾಗಿದೆ.

ಪರಶುರಾಮ ತಂದೆಯ ತೋರಿಸು ಎಂದು ಎಲ್ಲಮ್ಮಗೆ ಕೇಳುವುದು ಮತ್ತು ಹೆಸರಾದರೂ ಹೇಳು ಎಂದು ಬೆನ್ನ ಹತ್ತಿದಾದ ಅನೇಕ ವೇಶ ಧರಿಸಿ ಬೇರೆ ಬೇರೆ ಜೀವಗಳಲ್ಲಿ ತಪ್ಪಿಸಿಕೊಂಡು ಕೊನೆಗೆ ಕ್ವಾಣನಾಗಿದ್ದ ಎಲ್ಲಮ್ಮಗೆ ನಾನು ರಕ್ತಕ್ಕೆ ಹುಟ್ಟಿದೋನು, ರಕ್ತ ಕುಡಿತೀನಿ ಎನ್ನುವ ಪರಶುರಾಮ ಅದಕ್ಕೆ ಎಲ್ಲಮ್ಮಗೆ ಗಂಡನ ಹೆಸರ ಹೇಳಿದರೆ ಜೀವ ಹೋಗುತ್ತದೆ. ಹುಟ್ಟಿದ ಮಗನಿಗೆ ನನ್ನ ಹೆಸರ ಹೇಳಬ್ಯಾಡ ಅಂತ ಗಂಡನು ಹೇಳಿರುವುದು ಎಲ್ಲಮ್ಮಗೆ ಇಕ್ಕಟ್ಟಿನ ಸ್ಥಿತಿ ಉಂಟಾಗಿದೆ. ಅಲ್ಲಿಂದ ಎಲ್ಲಮ್ಮ ಊರು ಬಿಡುವಳು. ಹುಲಿಗಿನೆ ಬಿಟ್ಟು ಗಾವುದ ದೂರ ಕಣೆಕಲ್ಲು ಕೆರೆಗೆ ಬಂದಳು. ಅಲ್ಲಿ ಆಲದ ಮರ

ಸುತ್ತುತ್ತಾಳೆ. ನನ್ನ ಗಂಡನ ಹಿರೇಬ್ಯಾನಿ ಬೇಸ್ ಮಾಡಿದಿ ಉಧೋ ಅಮತ ಜಗ ಇಳ್ಸಿ ಯಪ್ಪಾ ಕರೆಕಟ್ಟಿ ನೂರು ವರ್ಷ ಇದನ್ನ ಕಟ್ಟೋಕೆ ಕಾರನ ಗೋರ್ಖ ಮುನಿಶ್ವರ ಇವನಲ್ಲಿ ಮೂರು ದಡೆವು ಗಂಡ್ರ ಐತಿ. ಅದನ್ನು ಇಟ್ಕೊಂಡು ಬಾರಲೋ ನಿನ್ನ ತಂದೆನ ತೋರ್ಸೆನು ಎಂದಳು.

ಆಗ ಪರಶುರಾಮ ನೀನು ಮಾಯಗಾತಿ ಮಾಯಾದರ ಹ್ಯಂಗ ಭೂಮಾಜ್ಞೆ ನಾನು ಮಾಯಾಗೊದಿಲ್ಲ ಅಂದಾಗ ಸರಿಯಂತ ಕೆರೆಕಟ್ಟೆ ಗುಮಟ ಬಂದು ಮುನಿಶ್ವರಗೆ ಶರಣು ಮಾಡಿ ಗಂಡ್ರಕೊಡ್ಲಿ ಕೇಳಿದ ತನ್ನ ಪರಿಚಯ ಹೇಳಿದ ಅದಕ್ಕ ಮುನಿಶ್ವರ ಪುಗಸ್ಯಾಟಿ ಕೊಡೋದಿಲ್ಲ ಮೂರು ಖಂಡುಗ ಅನ್ನ ತಂದು ನನ್ನ ಜೀವಕ್ಕ ಕೊಟ್ರೆ ಕೊಡ್ತೀನಿ, ಇಲ್ದಿಂದರೆ ಇಲ್ಲ. ಅಂದಾಗೆ ಹಾಗೆಯೇ ಆಗಲೆಂದು ಒಂದು ಖಂಡಗ ಛೆಜ್ಜಿ, ಒಂದು ಖಂಡುಗ ಅನ್ನ ಒಮದು ಖಂಉಗ ಜ್ವಾಳಾ ಉಧೋ ಅಂತ ತರ್ತೀನಿ ಅಂತ ಹೊಳಿದಂಡೀಗೆ ಬಮದ ಅಲ್ಲಿ ಐದು ಹಿಡಿ ಕೆಸರು ಮಾಡಿ ಅದು ಭಂಡಾರ, ಮಣ್ಣು, ಕೆಸ್ರು ಸೇರಿಸಿ ಮಾಡಿದರು.

"ಉಧೋ ಅನಬೇಕೋ ಮಣ್ಣುದ ಹರಿವಿ ಮಾಡಬೇಕೋ
ಏ.. ಹರವಿ ಮಾಡ್ಯಪ್ಪ ಬಣ್ಣದ ಹರವಿ ಮಾಡ್ಯಪ್ಪ
ನೀರು ತುಂಬ್ಕೊಂಡು ಹಾವಿನ ಸಿಂಬಿ ಮಾಡಬೇಕು" [೮೪]

ಈ ರೀತಿಯ ಶರತ್ತುಗಳು ಹೊಳಿದಂಡ್ಯಾಗ ನೀರು ತುಂಬಿಕೊಂಡು ಹಾವಿನ ಸಿಂಬಿ, ಗಿಡಮ್ಯಾಲ ಕಾಯಿ ಹರ್‍ದು ಸೂಸುಗ ಮಾಡಿ, ಮೂರು ಹಿಡ್ಕಿ ಮಣ್ಣು ಉಡಿ ಕಟ್ಕೋರೆಬೇಕು ಆಗ ಗಂಡಸರ ಮುಕ ನೋಡದೇ ಬರಬೇಕು. ಅಲ್ಲಿಂದ ಸವದತ್ತಿ ಎಲ್ಲಮ್ಮ ಗಂಡನ ಹಿರೇಬ್ಯಾನಿ ಮೈ ತೊಳದಲ್ಲಿ ಬಂಡಿ ಮ್ಯಾಲೆ ಕೊಡ ಇಳಿಸಿದಳು. ಬಂಡೆ ಎತ್ತುಗಳ ಮಾಡಬೇಕು. ಆಲದ ಗಿಡದ ಬಡ್ಡೆಯಿಂದ ಮಡಿಕೆ ಮಾಡಿ ಕೊಂಬೆ ಮುರಿದು ನೊಗ ಮಾಡಿ ಕೊಡದ ನೀರಿನಿಂದ ಎತ್ತುಗಳ ಮುಖ ತೊಳ್ದು ಹೂವ್ವ ಹಾಕಿ, ಸೂಸುಗ ಹಾಕಿ, ಕಾಯಿ ಒಡೆದು, ಭಂಡಾರ ಕಲ್ಸಿ ಉಧೋ ಎಂದು ಬಡಿಮ್ಯಾಲೆ ಬಿತ್ತಿ ನಿರ ಉಗ್ಗಿ ಬೆಳೆ ಬೆಳೆಸಬೇಕು. ಬೆಳ್ಳಿ ಕುಡುಗೊಲು, ಬಂಗಾರದ ಕುಡಗೋಲು ತಗೊಂಡು ನೀನು ನಿನ್ನ ತಾಯಿ ಮೂರು ಖಂಡುಗ ಜ್ವಾಳ, ನವಣೆ, ಸಜ್ಜೆ, ಬಂಡೆಮ್ಯಾಲ ಬೆಳಸಿ ಕೊಯ್ಯಬೇಕು ಆಗ ಕೊಡ್ತೀನಿ ನಿನ್ಗೆ ಗಂಡ್ರಕೊಡ್ಲಿ ಎನ್ನುವ ಮುನೀಶ್ವರನ ಆ ಮಾತಿಗೆ ಸರಿಯಂತ ಪರಶುರಾಮ ಬರುತಾನೆ. ಎಲ್ಲಮ್ಮ ಪರಶುರಾಮ ಬರುವಾಗ ಗೌಡ್ರು ಖಳದಾಗ ಹಲೆ ಮರ ತಗ್ಗಂಡು ಮಾದರಾಕಿ ಆಗ್ಯಾಳ ಲೇಕಿ ಕುಂತಾಳ ಯಾಕೆಂದರೆ ಹಿಂಗಾನ ಆದ್ರು ನನ್ಮಗ ಬಿಟ್ಪೋಗಬಹುದೇನೋ ಅಂತ ಆದರೆ ಆ ಮುದುಕಿನ ನೊಡಿ ಅಲ್ಲಿಗೆ ಹೋಗಿ

"ಯವ್ವಾ ಯಾರವ್ವ ನೀನೆ ಲೇಕಿ ಮುದೆಕೆವ್ವಾ
ನಮ್ಮಮ್ಮನ ನೋಡಿದ್ಯಾ ನಿನು ರೇಣುಕೆ ಎಲ್ಲಮ್ಮನ" [೮೫]

ಅದಕ ಎಲ್ಲಮ ಯಪ್ಪಾ ಗೌಡ್ರು ಕಣದಾಗ ಲೇಕಿ ಕುಂತಿನಿ ನಾನು ಅಂದ್ಲು. ಆಗ ನೀನೇ ನನ್ನವ್ವ ಎಂದು ಎಷ್ಟು ಅವತಾರ ತಾಳತಿ ನೀನು ಎದ್ದೇಳೆ ದೇವಿ ನಿನ್ನ ಕಡದೇನ ಸರಗಾ ಆಕೇನು ಬಿಸಾಕು ಈ

ಕಣ್ಣಾಗ ಆಡ್ದೇನು. ಇಲ್ಲೇ ಸಮಾಧಿ ಮಾಡೇನು ಎಂದಾಗ ಎಲ್ಲಮ್ಮ ಗಡಗಡ ನಡುಗಿ ಮರ ಬಿಸಾಕಿ ಎದ್ದು ಎಪ್ಪಾ ಮಗನೆ ನನ್ನ ಗೋಳ್ಯಾಡಿಸಬ್ಯಾಡಪ್ಪ ಅಂದಾಗ ಯವ್ವಾ ನಿನ್ನ ಗೋಳ್ಯಾಡಿಸೋದಿಲ್ಲ ಕಷ್ಟ ಯಾಕ ಪಡ್ತೀಯ ತಂದಿ ಯಾರು ಇಲ್ಲ ಹೆಸರಾನ ಹೇಳು. ನನ್ಗೆ ತಾಯಿ ಯಾರೆಂದು ಕೇಳ್ವಲ್ರು ತಂದಿ ಯಾರಂತ ಕೇಳ್ತಾರ. ತಂದಿ ಇಲ್ದವನು ಊರಿಗುಟ್ಟಿದವ್ನು ಅಂದ್ರೆ ನಾನು ಹ್ಯಾಂಗ ಇರಬೇಕು ಎನ್ನುತ್ತಾನೆ. ಪ್ರಸ್ತುತ ಸಮಾಜಿಕ ವ್ಯವಸ್ಥೆಯಲ್ಲಿ ತಾಯಿ ಯಾರೆಂದು ಹೇಳುವುದು ಸುಲಭ ಆದರೆ ತಂದೆ ಯಾರೆಂದು ಹೇಳುವುದು ಕಷ್ಟ. ಏಕೆಂದರೆ ಎಲ್ಲಾ ಮಹಿಳೆಯರು ಪತಿಯೇ ಪರದೈವ ಎಂದು ಬಾಳುವ ಕಾಲ ಒಂದಾನೊಂದು ಕಾಲಕ್ಕೆ ಸೀಮಿತವಿದ್ದು ಇಂದು ವ್ಯವಸ್ಥೆಗೆ ತಕ್ಕಂತೆ ಬದಲಾಗಿದೆ. ಮನಸ್ಥಿತಿಗಳು ಬದಲಾಗಿವೆ.

ಇಂತಹ ಸಂದರ್ಭದಲ್ಲಿ ಎಲ್ಲಮ್ಮ ನಿನ್ನ ತಂದಿ ಧ್ಯಾನಕ್ಕ ಕುಂತಾನ ದುಷ್ಟ್ರಲೋಕ, ಕರ್ಮಲೋಕ ನೋಡಂಗಿಲ್ಲ ಎಂದಾಗ, ಪರಶುರಾಮ ಅಮ್ಮಾ ಅಂತ ತಂದಿನೇ ನೋಡಬೇಕು ಅಂತ ಹೇಳುತ್ತಾನೆ. ಎಲ್ಲಮ್ಮ ಉಧೋ ಅಂತ ಜಗ ಎತ್ತಿ ಇಲ್ಲದ ಕಷ್ಟ ಕೊಡಬ್ಯಾಡಪ್ಪ. ಯತ್ತಾಗ್ಹೋದ್ರು ನನ್ಮಗ ಬಿಡಾದಿಲ್ಲ. ಮತ್ತೆ ನಮ್ಮಪ್ಪನ ತೋರ್ಸಮ್ಮ ಎಂದಾಗ ನಿಮ್ಮಪ್ಪ ದೇವ್ರು ಧ್ಯಾನಕ್ಕ ಕುಂತಾನ ಮತ್ತೆ ಹೊಳಿದಂಡಿಗೆ ಹೋಗಿ ಬರ್ತೇನೆ. ಎಂದ ಎಲ್ಲಮ್ಮಗೆ ಪದೇ ಪದೇ ಕಾಡಿಸ್ತಾನೆ. ಆಲದ ಮರ ಏರಿ ರಕ್ತಕ್ಕೆ ಹುಟ್ಟಿದೋನು ರಕ್ತ ಹೀರತ್ತೀನಿ ಅಂದಾಗ ಹೊಳಿ ದಂಡೀಲಿ ಬಂದ್ರು ಮಾಯಾಶಕ್ತಿ ಹೊಳಿದಂಡ್ಯಾಗ ಬಂದು

"ಉಧೋ ಅಂತ ಮೂರು ಸರ್ತಿ ಮುಣ್ಗಿ ಬಿಟ್ಳು
ಮುತ್ತಿನ ಶರಗಲಿ ಶರಣು ಮಾಡಿದ್ಳು
ಆಗ ಮೂರು ಹಿಡ್ಕಿ ಕೆಸರು
ಆಗ ಎರ್ಡು ಹಿಡ್ಕಿ ಮಣ್ಣು
ಆಗ ಒಂದು ಹಿಡ್ಕಿ ಭಂಡಾರ್ಹಾಕಿ" [೮೬]

ಉಧೋ ಅಂತ ಮಣ್ಣಿನ ಹರವಿ ಮಾಡ್ಯಾಳ ಮುತ್ತಿನ ಶರಗಿನಾಗೆ ನೀರಿನಾಗೆ ಹಾವ ಹಿಡ್ದು ಸಿಂಬಿ ಮಾಡಿ ಟೆಂಗಿನಕಾಯಿ ಅರ್ದು ಹೂವ್ವ ಹರದು, ಸೂಸಗ ಮಾಡಿ ಮೂರು ಹಿಡ್ಕಿ ಮಣ್ಣು ಉಡಿ ಕಟ್ಟಿಕೊಂಡು ಥೈ ಥೈ ಕುಣಿತ ಎಲ್ಲಮ್ಮ ಬರುತ್ತಾಳೆ. ಯಾರೂ ನೋಡಲಾರ್ದಂಗೆ ಬರ್ತ್ತಾಳೆ. ಪಾರ್ವತಿ ಪರಮೇಶ್ವರ ನೋಡಿ ಸತ್ಯ ಪರೀಕ್ಷಿಸಲು ರಥ ಇಳ್ಸಿ ಬರ್ತಾರೆ. ಎಲ್ಲಮ್ಮ ಅವರ ನೋಡುತ್ತಾ ಕಿಲಕಿಲ ನಗುತ್ತಾ ಥೈ ಥೈ ಥಕ ಥೈ ಅಂತ ಕುಣಿತಾ ಬರುತ್ತಾಳೆ. ಪಾರ್ವತಿ ಪರಮೇಶ್ವರರು ಜತೆ ನೋಡಿ ಎಷ್ಟು ಚಂದೈತಿ ನನ್ಗ ಇಲ್ಲಂತ ಮನದಾಗನ್ಕೊಂಡ್ಲು ಆಗ ಕೊಡ ಎರ್ಡು ಹೋಳಾಯ್ತು ಕಾಯಿ ಸೂಸುಗ ಕುಂದೋಯ್ತು, ಹಾವು ಬೆನ್ನಿಂದ ಇಳಿದೇ ಹೊಯ್ತು ಆಗ ಪಾರ್ವತಿ ಪರಮೇಶ್ವರರ ನಾವು ಕೊಟ್ಟಿದ ಶಿಶುವು ನಮಗೆ ಶಾಪ ಕೊಡ್ತಾಳಂತ ರಥ ಮೇಲೆರಿಸಿ ಹೊರಟರು. ಎಲ್ಲಮ್ಮ ದುಷ್ಟ್ರ ನೋಡಿನಿ ಅಂತ ಓಂದಕ್ಕ ಬಂದು ಉಡ್ಯಾಗ ಬಿದ್ದ ಸೂಸುಗ ಹೊಳಿದಂಡ್ಯಾಗ ಬಿಟ್ಳು ಉಧೋ ಅಂತ ಮೂರು ಸರ್ತಿ ಮುಳ್ಗಿ, ಮೂರು ಓಡ್ಕಿ ಕೆಸ್ರು, ಎರ್ಡು ಓಡ್ಕಿ ಮಣ್ಣು ಭಂಡಾರ್ಹಾಕಿ ಮುತ್ತಿನ ಸೆರಗಾಗ ಹರವಿ ಮಾಡಾಕ ಹೋದ್ರೆ ಕರಗೆ ಹೊತ್ಕೈತೋ ಯಮ್ಮ ಎಂದು ಗಂಗಮ್ಮನಲ್ಲಿ ಪ್ರರ್ಥಿಸಿ ಇಷ್ಟು ಕಷ್ಟ ಕೊಡಬ್ಯಾಡಮ್ಮ, ಗೋಳ್ಯಾಡಿಸಬ್ಯಾಡಮ್ಮ ಎಂದಾಗ ಗಂಗಾದೇವಿ ನೋಡಿದ್ಳು. ನೋಡಿ ಯಾಕ ಗೋಳಾಡ್ತೀಯ ನಾನೇ

ಒಗಿತಿನಿ ಎಂದು ಎರಡು ಹಿಡಕಿ ಮಣ್ಣು ಒಗದಳು ಅದು ಎಲ್ಲಮ್ಮನ ಉಡ್ಯಾಗ ಬಿತ್ತು. ಅದರಿಂದ ಅರವಿ ಮಾಡ್ಕೊಂಡು ನೀರ ತುಂಬ್ಕೊಂಡು ನೀರಾಗಳ ಹಾವು ಹಿಡಿದು ಸಿಂಬೆ ಮಾಡ್ಕೊಂಡು ಹುವ, ಕಾಯಿ, ಹರ್ಕೊಂಡು ಕುಣಿತಾ ಉಧೋ ಅಂದು ಸವದತ್ತಿ ದೇವಿ ಕಣಿಕಲ್ಲ ಕೆರಿಗೆ ಎಲ್ಲಮ್ಮಾಗಿ ಬರುತ್ತಾಳೆ. ಪರಶುರಾಮ ನೋಡಿ, ಅವಳ ವನವಾಸ, ಗೋಳಾಟ ನೋಡಾಕಾಗಲ್ಲಮ್ಮ ಎಂದು ಹೇಳುವಾಗ ಕಲ್ಲು ಸುಲ್ಬಿ ಎತ್ತುಗಳ ಮಾಡಿ ಗಿಡದ ಬಡ್ಡಿಯಿಂದ ಮಡಕಿ ಮಾಡಿ, ರೆಂಬೆಯಿಂದ ನೊಗ ಮಾಡಿದ್ಲು ಮಕ ತೊಳ್ದು, ಸೂಸಗ ಹಾಕಿ, ಭಂಡಾರಾಕಿ, ಉಧೋ ಅಂತಾಳೆ ಬೀಜ ಚಲ್ಲಿ ನೀರ ಉಗ್ಗಿ ಸಜ್ಜಿ, ಜ್ವಾಳ, ನವಣಿ ಬೆಳೆದಾಳೆ ಎಲ್ಲಮ್ಮ. ಮೂರು ಎಕ್ರೆ ಬಂಗಾರ ಕುಡುಗೋಲು, ಬೆಳ್ಳಿ ಕುಡಗೋಲು ತಗಂಡು ಪೂಜೆ ಮಾಡಿ ತಾಯಿ ಮಗ ಸೇರಿ ಕೊಯ್ದರೆ, ಪರಶುರಾಮ ಅರ್ಧ ಎಕರೆ ಒಂದೇ ಕೈಲೇ ಹಿಡ್ಯಾನೆ ಕೊಯ್ದು ಬಂಡೆಮ್ಯಾಲಾಕಿ ಕಲ್ಲೆತ್ತಿಲೇ ತುಳಿಸಿದ. ತೂರಲು ಪುಟ್ಟಿಲ್ಲ ದೇವಿ ಸೆರಗಾಲಿ ತುಂಬಿ ತುರ್‍ಯಾಳೆ. ಜ್ವಾಳ ನವನಿ, ಸಜ್ಜೆ ತೂರ್‍ಯಾರೆ ಅದರಿಂದ ಜ್ವಾಳ ಕಿಚಡಿ, ಸಜ್ಜಿ ಹಿಟ್ಟು ಮಾಡಿ ಜಗಪುಟ್ಯಾಗ ಅನ್ನ, ಟಡಿಗೆ ಮಾಡಬೇಕಂತ ನೀರ ತಂದು ನವಣಿ ಅಕ್ಕಿ ಹಾಕಿ ಕೈಲೆ ತಿರುವಿ ದೇವಿ ಬಿಸಿ ನೀರಾಗಾಕಿ ಬಲಗ್ಯೆಲಿ ಎತ್ತಿ ಬಂಡೆಮ್ಯಾಲ್ಹಾಕಿದ ನವಣಿ ಅನ್ನ ಮಾಡಿದ, ಸಜ್ಜೆಯಿಮದ ಕಡುಬು ಮಾಡಿದ ಜ್ವಾಳದ ಕಿಚ್ಡಿ ಮಾಡಿ ಪರಶೂರಾಮ ಮೂರು ಖಂಡುಗ ಅನ್ನ ಮಾಡಿ, ಮುರು ಖಂಡುಗ ಅನ್ನ ಒಂದೇ ಗಂಟ ಕಟ್ಟಿದ ಜೀವ ಹೋದ್ರು ಚಿಂತಿಲ್ಲ ಅಂತ ತಂದೆ ಹತ್ತರ ಹೋಗಬೇಕು ಅಂತ ಉಧೋ ಅಂದಾನ ತಲಿಮ್ಯಾಲ ಹೊತ್ತಾನ. ನಾಗಮುನೀಶ್ವರನಲ್ಲಿ ಬಂದು ಮೂರು ಖಂಡುಗ ಅನ್ನ ಕೊಡುವನು. ಅದು ಮುನೀಶ್ವರನ ಗಂಟಲಿಗೆ ಅಡ್ಡ ಬಿತ್ತು. ಆಗ ಎನು ಮಾಡ್ಲಿ ಎಂದು ಯೋಚಿಸಿ ಕೆರೆ ದಂಡೀಲಿ ಬಕ್ಕ ಬಾರ್ಲಿ ಮಲ್ಕೊಂಡು ಬೆನ್ನು ತುಳಿದರು. ಆಗ ಅನ್ನ ಕೆರೆಯಾಗ ಬಿತ್ತು ಕಪ್ಪೆ ಮೀನು ತಿಂದವು. ಮುನೀಶ್ವರ ಕೆರೆ ಕಟ್ಟಿದಾಗ ಅನ್ನ ತಿಂದಿದ್ದು ಗಿಡ ಮ್ಯಾಲಿನ ಹಣ್ಣ ತಿಂದು ನೀರ ಕುಡಿಬೇಕು ಆಸೆಯಾಗಿ, ತಿಂದೆ ಹಿಂಗಾತು ಅಂತೇಳಿ ಗಂಡ್ರ ಕೊಟ್ಟು ಮುನೀಶ್ವರ ಅಲ್ಲಿಂದ ಪರಶುರಾಮ ಕಾರ್ತಿಕ ರಾಜನ ಸಂಹಾರ ಮಾಡುವ ಕಾವ್ಯ ಮುಂದಿನಂತಿದೆ.

**ಪರಶುರಾಮನಿಂದ ಕಾರ್ತಿಕ ರಾಜನವರ ಸಂಹಾರ**

ಮುನೀಶ್ವರ ತಾತನಿಂದ ಗಂಡ್ರಕೊಡ್ಲಿ ಪಡೆದ ಪರಶುರಾಮನು ಕಾರ್ತಿಕ ರಾಜನ ಕಡಿಬೇಕು ಅಂತ ಹೊರಟನು. ಯಾಕೆಂದರೆ ತಂಗಿನ ತುಳಿದ ಹಿಂಸಿಸಿದ ಕಾತಿಕ ರಾಜನೋರ ಮೇಲಿನ ಸಿಟ್ಟಿನಿಂದಾಗಿ ಹೊರಟನು. ಅಲ್ಲಿಂದ ತಂದೆ ತೋರಿಸದ ತಾಯಿಗೆ ಕಡಿಬೇಕು ಅಂತ ಅಲ್ಲಿಗೆ ಬಂದಾನೆ. ಅಮ್ಮನಲ್ಲಿಗೆ ಬಂದು ಕಾರ್ತಿಕ ರಾಜನೋರು ತಪಸ್ಸಿಗೆ ಕುಂತ ನಮ್ಮಪ್ಪನ ತುಳ್ದಿ ಹೋಗಿದಾರಾ, ದುಷ್ಟ ದುರ್ಮಾರ್ಗಗ್ರು ಅವರ ನಾಶ ಮಾಡ್ತೀನಿ ಅಂತ ಹೊರಟನು. ದೇವಿ ತವರು ಮನೆ ನಾಶ ಆಗಬಾರ್ದು ಅಂತ ಪರಶುರಾಮನ ಹುಟ್ಟಿದಾಗ ನಾಶ ಮಾಡ್ಲಿಲ್ಲ ಅಂತ ಯೋಚಿಸುವಾಗ

"ಯಮ್ಮ ನೀನು ಹೆಸ್ರೇಳು
ಅಯ್ಯೊ ಮಗನಾ
ಏನ್ಹೆಸ್ರೇಳಬೇಕು
ಹಂಗಾರೆ ಕಡ್ದು ಬರ್‍ತಿನಂತ" ...

ಪರಶುರಾಮ ಪಟ ಪಟ ಪಟ ಹಲ್ಲು ಕಡಿದು ಗುಡ್ಡ ಏರಿಯಾನೆ ಜಮ್ಮಿಗಿರಿ ಹೋಗಿ ಕಾರ್ತಿಕ ರಾಜನವರಿಗೆ ಕರಿದಾನೆ. ಅವರು ಕರೆ ರಾಕ್ಷಸಿ ಹೊಟ್ಯಾಗ ಹುಟ್ಟಿದವ್ರು, ಹುಲಿಗೆವ್ವನ ಮಗ ಕಡ್ಡೇವ್ರು ಅಂದ್ರು ಆಗ ಬರ್ರಲೇ ಎಂದು ಗರ್‌ಗರ್ ತಿರುಗ್ಯಾನೆ ಕೊಡ್ಲಿ ಹಿಡ್ಕೊಂಡು ಏಳುತೆಲೆ ಕಡ್ದು ಬಿಟ್ಟ. ಅದನ್ನ ಬ್ರಹ್ಮ ನೋಡಿ ಪರಶುರಾಮ ಏಳು ಮಂದಿನ ಒಂದೇ ಏಟಿಗೆ ಕಡಿದಾನೆ. ಅದನ್ನು ರಾಮನ ಬ್ರಹ್ಮ ನೋಡಿ ಬರುವಾಗ ಅವರನ್ನ ಎರಡೇ ಏಟಿಗೆ ಕಡಿದಾನೆ.

"ರಾಮ ಅಂದಾಗ ಗರಗ್ನೆ ಕಡ್ದಾನೆ
ಕತ್ತರ್ಸಿ ಬಿಟ್ವಾನೆ ಅವ್ನ ಎರ್ಡೆ ತುಂಡಮ್ಮ" [೮೮]

ಎಲ್ಲಮ್ಮ ತಮ್ಮ ಅಣ್ಣರ ಕಡ್ಡ ಪರಶುರಾಮನ ನೋಡಿದ ಅವಳನ್ನು ಬಾರಲೇ ಎಂದು ತುಂಡು ಮಾಡಿದ. ಕೈ ಕಡ್ದಾನಾ ಮೂಗೆ ಕಡ್ದಾನ ಸುರ್ಪಣಕಿದ್ದು. ಕುಂತಿ ಮಾದೇವಿ ಬಂದು ಪಾದಕ್ಕ ಬಿದ್ಳು ಆಗ ಯಪ್ಪಾ ಪರಶೂರಾಮ ನಿನ್ನ ತಾಯಿನ ನಾನೇ ಜೋಪಾನ ಮಾಡಿದ್ದು ಎಂದು ಹೇಳುತ್ತಾಳೆ. ಮುತ್ತೈದೆ ಕಳ್ದಿಯಲ್ಲೋ ನನ್ನ ರಂಡೆ ಮಾಡ್ದೆಲ್ಲೊ, ಎಂಥ ದುಷ್ಟನಾಗಲೀ, ಕುರುಡನಾಗಲಿ, ಕುಂಟನಾಗಲಿ ಜೀವಕ್ಕ ಗಂಡ ಮುಖ್ಯವೆಂದು ಹೇಳುವಾಗ ನನ್ನ ತಾಯಿ ಜೀವ ಜೋಪಾನ ಮಾಡಿದಾಕಿ ಜೀವ ಉಳಿಸಿದಾಕಿ ನಿನ್ನ ಮುತ್ತೈದೆತನ ಕಳಿಯೋದಿಲ್ಲ, ನಿನ್ನ ಜೀವ ಉಳಿಸತೀನಿ ಅಂದನು.

"ಕುಂತಿ ಮಾದೇವಿ ಮಗ ಕರ್ಕೊಂಡು ಬಂದ
ತೆಲಿ ಕಡ್ದಾನ ಬನ್ನಿ ಗಿಡಕ್ಕೆ ಕಟ್ಯಾನ ದೇವಿ
ಏಳು ದೇವ್ರು ಗುಡ್ಡದಾಗ" [೮೯]

ಅವಳ ತಲೆ ಕಡಿದಾನೆ ಬನ್ನಿ ಗಿಡಕ್ಕೆ ಕಟ್ಟುತ್ತಾನೆ. ಅಲ್ಲಿ ರಕ್ತ ಹರಿತೈತೆ, ಅವಳ ಹೊತ್ಕೊಂಡು ಬಂದು ತಾಯಿ ಹತ್ತಿರ ಬಂದು ಆಗ ಸವದತ್ತಿ ಎಲ್ಲಮ್ಮ ದುಃಖ ಮಾಡ್ತಾಳೆ. ಈ ರೀತಿಯ ಬನ್ನಿಪೂಜೆ ಪ್ರತಿಯೊಂದು ಊರಿನ ಜಾತ್ರೆಯಲ್ಲಿ ನಡೆಯುತ್ತದೆ. ಮುತ್ತೈದೆ ಕಲ್ಪನೆಯು ಒಂದು ಶ್ರೇಷ್ಠವಾದ ನಂಬಿಕೆಯೇ ಹುಟ್ಟಿಕೊಂಡಿದೆ. ಪತಿಯ ಮರಣದ ನಂತರ ಚಿತೆಯೇರುವ ಸ್ತ್ರೀ ಪತಿದೈವಾ ಆಚರಣೆ ಸೂಚಿಸುತ್ತದೆ. ಕಥನ ಕಾವ್ಯ ಮುಂದುವರೆದು ಪರಶುರಾಮನ ತಂದೆಯ ಸಾಕ್ಷಾತ್ಕಾರ ನಡೆಯುತ್ತದೆ.

**ಪರಶುರಾಮನಿಗೆ ತಂದೆಯ ಸಾಕ್ಷಾತ್ಕಾರ**

ಪರಶುರಾಮನ ತಾಯಿಯ ಸಲುವಿದಾಕಿಗೆ ರಂಡೆ ಮಾಡಿ ಬಿಟ್ಟೆ ಅಂತ, ಅವಳ ಮುತ್ತೈದೆತನ ಕಳೆಯೋದಿಲ್ಲಂತ ಹೇಳಿ ನಡಿ ನನ್ನ ತಂದೆಯ ತೋರಿಸು ಎಂದಾಗ ತೋರ್ಸಿತಿನಿ ಮಗ ನಾ ನಮ್ಮಣ್ಣರು ಪರಾಕ್ರಮದೋವ್ರು ಅವರ್ನೆ ನಾಶ ಮಾಡಿಯಾ. ಭೂದ್ಯಾಗ ಹೊಕ್ಕೊಂಡ್ರು ಬಿಡಾದಿಲ್ಲ ಅಂತ ಕುಂತಿ ಮಾದೇವಿ ಮಗನ ಕರಕೊಂಡು ಹುಲಿಗಿಗೆ ಬಂದ್ಳು. ಅಲ್ಲಿ ಹರಳಯ್ಯನ ಮಗಳು ಮಾದರ ಮಾರೆಕ್ಕನ ಮಗ ಚೌಡಿಕಿರಾಮು ಅಂಟಿ ಮಾವಿಳಿ ಪಟ್ಟಣಕ್ಕ ಕರ್ಕೊಂಡು ಬಂದು ಅಲ್ಲಿ

"ಅತ್ತಿ ಮಾವಗೆ ಯಮ್ಮಾ ಬರ್ರೆ ಅತ್ತೆಮ್ಮ

ನಿನ್ನ ಮಗನ್ನ ನಾನು ತೋರಿಸ್ತೀನಿ ನಿಮಗ
ಇಪ್ಪಿಗಿ ಲೋಕ ತೋರ್ದೇನ
ಜಲ್ಮದ ಗಂಡನ್ನ" [೯೦]

ಚೌಡಿಕಿ ಮಾದೇವಿಗೆ ಗಂಡ ಇಲ್ಲಂಗ ಗಂಡು ಹಡದವ್ಳೆ ಲೋಕದಲ್ಲಿ ನಿನಗೆಲ್ಲಿ ಗಂಡ ಇದಾನೆ. ಈಗ ಜಗದಾ ದೇವ್ರು ನಿನ್ನ ಜೀವದ ಗಂಡ ತೋರಸ್ತೀನಿ ಅಂತ ಅತ್ತೆ ಮಾವರ ಕರ್‍ಕೊಂಡು ಜಗ ಹೊತ್ಕೊಂಡು ಬರ್‍ತಾಳೆ. ಗಂಡನಲ್ಲಿಗೆ ಬಂದು ಏಳ ಸಮುದ್ರ ಆಲದ ಮರ ಸುತ್ತಮ್ಮ ತಿರುಗಿ, ಕರೆ ಕಂಬ್ಳಿ ಹಾಸಿ, ಜ್ವಾಳ ನಿಧಿ ಹಾಕಿ, ಉಧೋ ಅಂತ ಜಗ ಇಳಿಸೊತ್ತಿಗೆ ತಂದೆನ ತೋರ್‍ಸಮ್ಮ ಎಂದ ಪರಶುರಾಮನ ಪ್ರಶ್ನೆಗೆ ಉತ್ತರವಾಗಿ

"ದುಃಖಿ ಮಾಡ್ಯಮ್ಮ ಅವ್ವೆ ನಿನ್ನ ತಂದಿಯಲೋ
ಗಿಡ ಬಡ್ಡಿಗೆ ದೇವ್ರ ದ್ಯಾನಾ ಮಾಡ್ತಾನಾ" [೯೧]

ನಿನ್ನ ತಂದೆ ಮಾಯಿಸಿ, ಜಗದ ದೇವರ ಮಗನಪ್ಪ ತಲೆ ಗಿಡದ ಮ್ಯಾಲೆ ಕುಂಡ ಗಿಡದ ಬಡ್ಡಿಗೆ ಬಿದ್ದೈತೆ ಸುಳಿಯಾಗ, ತಲೆಯಾಗ ಜೀವ ಐತೆ ಕ್ಯಾಂವ್ ಅಂತಂದು ಬಾಯಲಿ ಅಂತಾನ ಉಧೋ ಅಂತಾನ ಮಗ ನೋಡಿ, ಅತ್ತೆ, ಮಾವ, ಸೊಸೆ, ಮೊಮ್ಮಗ ನೋಡಿದ್ರು ಮಾಯಿಸಿ ಅಂತ ನೋಡುವಾಗ ಪಾತಾಳಕ ತುಳಿದು ಬಿಟ್ಟಾರ. ಕಾರ್ತಿಕ ರಾಜನೋರ ತುಳಿತದಿಂದ ಮುಕವೊಂದು ಕಾಣತ್ತೈತಿ. ಮೂಗು, ಕಿವಿ, ಕಣ್ಣು, ಕುದ್ಲು ಮುಚ್ಚಿಕೊಂಡಾವೆ. ಇದೇ ನಮ್ಮಮ್ಮ ಜೀವದ ಗಂಡ ತೋರಿಸಿದ್ರೆ ಜೀವ ಹೋಕ್ತೈತೆ ಅಂತೇಳಿ ತೋರ್‍ಸಿಲ್ಲ ಅಂದ್ಕೊಂಡು ಎಲ್ಲಮ್ಮನ ಸೆರಗೊಡ್ಡಿ ಬೇಡ್ತಾರ ಜೋಪಾನ ಅಂತ ಕುಂತಿ ಮಾದೇವಿ, ಚೌಡಿಕ್ಯದೇವಿ, ಸೊಸೆ ಮಾದರ ಮಾರೆಕ್ಕ ಬೇಡಿದ್ರೆ ದೇವಿ ಉಧೋ ಅಂದಾಳ, ಕ್ಯಾಕಿ ಹೊಡಿತಾಳೆ.

**ಪಾರ್ವತಿ ಪರಮೇಶ್ವರರಿಂದ ಜೀವನ್ಮುಕ್ತಿ**

ದೇವಿ ಕೇಕೆ ಹೊಡಿತಾ ಇರೋ ಶಬ್ದ ಪಾರ್ವತಿ ಪರಮೇಶ್ವರು ಕೇಳಿಕೊಂಡು, ಜೀವಕೊಟ್ಟೋರು ನಾವೇ ಜೀವಕ್ಕ ಜ್ಞಾನ ಮಾಡಿ ಬರಬೇಕಂತ ರಥ ಇಳಿಸಿದ್ರು. ಪಾದಕ್ಕ ಶರಣ ಮಾಡಿ ಜೀವ ಹೋಗ್ಯೆತೆ ದೇಹ ಇದ್ದೈತೆ ಅಂಬೊತ್ತಿಗೆ ನಾವೇ ಕೊಟ್ಟೋರು ನಾವೇ ಕರೀತೀವಿ ಅಂತ

"ಏ.. ಜೀವ ಕೊಟ್ಟದವ್ವ ಬಾರೆ ನನ್ನ ಕೈಯಾಗ
ಜೆನ್ನಿನ ಮಣ್ಣಿನ ಜೀವಕ್ಕೆ ಜಲ್ಮಗ ಕೈಯಾಗ ಬಾರೇ
ಬಾ ನನ್ನ ಕೈಯಾಗ
ಏ.. ಎಲ್ಲಮ್ಮನ ತಲೆ ಗರ್ ಗರ್ ತಿರಗಿಕ್ಯಂತ
ಪಾರ್ವತಿ ಕೈಯಾಗ ಯಮ್ಮ ತೆಲಿ ಬಂದೈತೊ
ತಕ್ ತಕ್ ಧಿಗ್ ತೈತಾ" [೯೨]

ಪೌರಾಣಿಕ ಕಥೆಯೊಳಗೆ ಶಿವನ ಕಥೆಯು ಈ ರೀತಿಯಾದ ನಿರೂಪಣೆಯಿಂದ ಕೂಡಿದ್ದು

ದೇವರ ದರ್ಶನದಿಂದ ಜೀವನ ಮುಕ್ತಿ ಎಂಬ ಸಿದ್ಧಾಂತಕ್ಕೆ ಬದ್ಧವಾದ ಕತೆ ಬರುತ್ತದೆ. ಅದರಂತಯೆ ಜೀವ ಬಂದು ತಲಿಯನ್ನು ದೇಹಕ್ಕೆ ಜೋಡಿಸಿ ಹೊಲಿದು ಪಾರ್ವತಿ ಪರಮೇಶ್ವರು ಜೀವನ್ಮುಕ್ತಿ ಮಾಡುತ್ತಾರೆ. ಈ ತರಹದ ತಲೆ ಜೋಡಿಸುವಿಕೆ ಪೌರಾಣಿಕ ವೈದ್ಯಕೀಯ ಪದ್ಧತಿ ಇದ್ದಿರಲು ಸಾಧ್ಯ ಆದರೆ ಮೌಖಿಕ ಪರಂಪರೆ ಅದರ ಸರಿಯಾದ ನಿರ್ವಹಣೆ, ಮುಂದುವರಿಕೆ ಮಾಉವಲ್ಲಿ ವಿಫಲವಾಗಿರಲು ಸಾಧ್ಯವಿದೆ ಎಂದೇ ಊಹಿಸಬಹುದು. ಇಂದಿಗು ಸಹ ಎಷ್ಟೋ ನಾಟಿ ಔಷಧಿಗಳು ಸಹ ಅನಕ್ಷರಸ್ತರು ನೀಡುತ್ತಾರೆ. ನಾಟಿ (ಆಯುರ್ವೇದ) ಔಷಧಿಯು ಅನೇಕ ಕಾಯಿಲೆ ಗುಣಪಡಿಸುತ್ತಿರುವುದನ್ನು ನೋಡಬಹುದಾಗಿದೆ.

**ಎಲ್ಲರ ದೈವವಾಗಿ ಸವದತ್ತಿ ಎಲ್ಲಮ್ಮ**

ಎಲ್ಲಮ್ಮ ಏಳು ದೇಶಗಳ ತಿರುಗಿ, ಹುಲಿಗಿಯಲ್ಲಿ ಹುಟ್ಟಿ ಜೀವನದಲ್ಲಿ ಸವದತ್ತಿ ಎಲ್ಲಮ್ಮ ಗಂಡನಲ್ಲಿ ಜೀವ ಬಿಡುವಳು. ಅಣ್ಣಂದಿರು ಏಳು ಮಂದಿ ಕಾರ್ತಿಕ ರಾಜನೋವ್ರು, ಸೊಸೆಯಂದಿರು, ಮಗ ಪರಶುರಾಮ, ಮೊಮ್ಮಗ ಚೌಡಿಕ್ಯಾರಾಮ, ಅತ್ತೆ ಕುಂತಿದೇವಿ ಎಲ್ಲರೂ ಎಲ್ಲಮ್ಮ ಗಂಡತಲ್ಲಿ ಜೀವ ಬಿಡ್ತಾಳಂತ ಮೆಚ್ಚಿ ಏಳುಕೋಟಿ ಸವದತ್ತಿ ಎಲ್ಲಮ್ಮಗೆ ಪೂಜೆ ಮಾಡ್ತಾರೆ. ಉಧೋ ಅಂತ ಲೋಕ ಸಲುವಾಕಿ ನಿನ್ಗೆ ನಿತ್ಯ ಪೂಜೆ ಮಾಡ್ತೀವಿ. ಏಳುಕೋಟಿ ಏಳುದೇಶ ಬರಬೇಕು ನೀನು ಹೊಳಿದಂಡೀಲಿ ಹುಟ್ಟಿದೆಮ್ಮ ಪತಿಯ ಸೇವೆ ಮಾಡಿದ ದೇವಿ ಗಂಡನ ಪೂಜೆ ಮಾಡಿದಮ್ಮ ಜೀವಕ್ಕ ಪೂಜೆ ತಾಯಿ ಅಂತೇಳಿ ಪೂಜಿಸುತ್ತಾರೆ.

"ಮಂಗಳವಾರಮ್ಮ ನಿಂದು ಶುಕ್ರವಾರಮ್ಮ ದೇವಿ
ಆಗ ನೋಡಮ್ಮ ಬಿಳಿ ಸೀರೆಮ್ಮ ದೇವಿ
ನಿನ್ಗೆ ಬಿಳಿ ಕುಬುಸಮ್ಮ ನಿನ್ಗೆ ಅರಿಶಿಣ ಭಂಡಾರ ದೇವಿ
ಆರತಿ ನೊಡಮ್ಮ ಬಂಗಾರದ ಆರತಿ ಬೆಳಗೋದು ದೇವಿ
ಇನ್ನ ನಿನ್ಗೆ ಕೈ ಮುಗ್ದೆ ಪೂಜೆಮ್ಮ ದೇವಿ" ೯೩

ಈ ರೀತಿಯಾಗಿ ಶುಕ್ರವಾರ-ಮಂಗಳವಾರ ದೇವಿವಾರ ಅಂತ ಮೀಸಲಿಟ್ಟು ಇಂದಿಗು ಸಹ ಬಿಳಿಸೀರೆ, ಕುಬುಸ, ಅರಿಶೀಣ, ಭಂಡಾರ, ಆರತಿ ಮಾಡುವರು. ದೇವಿಗೆ ಶರಣು ಮಾಡಿ ಕಾಯಕ ಮಾಡಿದೋರಿಗೆ ವರ ಪಾಲಿಸುವಳು ದೇವಿ ಬೆಳ್ಳಗಿದ್ದವರ ಕರ್‍ರಗ ಮಾಡುವ ದೇವಿ, ಕರ್‍ರಗಿದ್ದವರ ಬೆಳ್ಳಗೆ ಮಾಡುವ ಶಕ್ತಿ ದೇವಿಗಿದೆ. ಬಣ್ಣದ ಎಲ್ಲಮ್ಮ ನೀನು ಸವದತ್ತಿ ಎಲ್ಲಮ್ಮ ಎಂದು ಕೈ ಮುಗಿಯುತ್ತಾರೆ. ದೇವಿ ಆರಾಧಕರು, ಭಕ್ತ ಕೋಟಿಗಟ್ಟಲೆ ಹರಕೆ, ನಂಬಿ ನಡೆದುಕೊಳ್ಳುವುದನ್ನು ಇಂದಿಗೂ ಕಾಣಬಹುದಾಗಿದೆ.

ಕಥನ ಕಾವ್ಯದ ಕೊನೆಯದಾಗಿ ಮಂಗಳ ಗೀತೆಗಳ ಮೂಲಕ ಕಾವ್ಯ ಮುಕ್ತಾಯ ಮಾಡುತ್ತಾರೆ

"ಮಂಗಳ ಮನಿ ಮಂಗಳ ಮನಿ ಮಂಗಳಾರ್ತಿನೆ
ಮಂಗಳ ಮನಿ ರಂಗ ಜೋತಿಶಿ
ಮುತ್ತಿನ್ಹಂತ ಸೀರೆ ನಿನ್ಗೆ ಲೋಕ ಉಡಸ್ತಾರ

ಬಂಗಾರ ಆರ್ತಿಗೋಳು ನಿನ್ಗೆ ತಂದಾರಾ.."[೪]

ಪ್ರತಿಯೊಂದು ಕಾವ್ಯ, ಕತೆಗಳ ಮುಕ್ತಾಯದಲ್ಲಿ ಮಂಗಳಾರತಿ ಹೇಳುವುದು ಜನಪದರ ವಾಡಿಕೆಯಾಗಿದೆ. ಅದೇ ರೀತಿಯಾಗಿ ಎಲ್ಲಮ್ಮನ ಕಥನ ಕಾವ್ಯದಲ್ಲೂ ಸಹ ಮಂಗಳಾರತಿಯ ಮೂಲಕವೇ ಮುಕ್ತಾಯವಾಗಿದೆ. ದೇವಿಗೆ ಜ್ಯೋತಿ ಬೆಳಗಿ ಸೀರೆ, ಕುಬುಸ, ಉಡಿಸಿ ಬಂಗಾರದ ಆರತಿ ಬೆಳಗುತ್ತಾರೆ. ದೇವಿಗೆ ಬೇವಿನ ತಪ್ಪಲು, ಭಂಡಾರ, ಸೂಸುಗ ಹಾಕುತ್ತಾರೆ. ಲೋಬಾನ ಊದಿನಕಡ್ಡಿ, ಕಾಯಿ ಕರ್ಪೂರ ಹಚ್ಚಿ ಕೈ ಮುಗಿದು ವರವ ಬೇಡುತ್ತಾರೆ. ವರ್ಷವಿಡೀ ಮಾಡುವ ಕಾರ್ಯಕ್ಕೆ ಮಂಗಳ ಹಾಡುತ್ತಾ ದೇವರ ಹೆಸರಿನಲ್ಲಿ ಪ್ರಾರ್ಥನೆ ಸಲ್ಲಿಸುತ್ತಾರೆ.

"ಮಂಗಳ ಜಯಮಂಗಳ ಮನಿ ಮಂಗಳಾರ್ತಿನೆ
ಮಂಗಳ ಮನಿ ನಿನ್ನ ಪೂಜೆ ಮಂಗಳಾಲೆ
ಮಂಗಳ ಮಂಗಳ ಮಂಗಳ"[೫]

ಇತರ ಈ ಕಥನ ಕಾವ್ಯ ಪರಂಪರೆಯು ಭಕ್ತರ ಸಮ್ಮುಖದಲ್ಲಿ ವಕ್ತರು ಹಾಡಿ ದೇವರ ವರ್ಣನೆ, ಘಟನಾವಳಿಗಳ ಮೂಲಕ ರಂಜಿಸುತ್ತಾ ಕಾವ್ಯ ಬೆಳೆಸುತ್ತಾರೆ. ಹಿಮ್ಮೇಳವಾಗಿ ತಂದಾನಾ ಎಮದು ಜೊತೆಗೆ ಧ್ವನಿಗೂಡಿಸುವ ಜನರಿರುತ್ತಾರೆ. ಕಾವ್ಯ ಹಾಡುವವರಿಗೆ ಪ್ರೇರಣೆಯೆಂಬಂತೆ ಕಾವ್ಯ ಬೆಳೆಸುತ್ತಾರೆ. ಸೊಗಸಾಗಿ ನಿರೂಪಿತ ಕತೆ ಕಾವ್ಯಗಳಲ್ಲಿ ಮೂಡಿಬಂದಿದೆ.

**ಅಡಿ ಟಿಪ್ಪಣಿಗಳು**

೧. ಎಂ.ಎಸ್.ಸುಂಕಾಪುರ, ೧೯೭೭, ***ಜೋಗತಿ ಹಾಡು,*** ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಪುಟ ಸಂಖ್ಯೆ – ೩

೨. ಅದೇ ಪುಟ ಸಂಖ್ಯೆ – ೪

೩. ಅದೇ ಪುಟ ಸಂಖ್ಯೆ – ೬

೪ ಅದೇ ಪುಟ ಸಂಖ್ಯೆ – ೭

೫. ಅದೇ ಪುಟ ಸಂಖ್ಯೆ – ೯

೬. ಅದೇ ಪುಟ ಸಂಖ್ಯೆ – ೧೦

೭. ಅದೇ ಪುಟ ಸಂಖ್ಯೆ – ೧೦

೮. ಅದೇ ಪುಟ ಸಂಖ್ಯೆ – ೧೧

೯. ಅದೇ ಪುಟ ಸಂಖ್ಯೆ – ೧೫

೧೦. ಅದೇ ಪುಟ ಸಂಖ್ಯೆ – ೧೬

೧೧. ಅದೇ ಪುಟ ಸಂಖ್ಯೆ – ೨೫

೧೨. ಅದೇ ಪುಟ ಸಂಖ್ಯೆ – ೩೧

೧೩. ಅದೇ ಪುಟ ಸಂಖ್ಯೆ – ೫೫

೧೪. ಅದೇ ಪುಟ ಸಂಖ್ಯೆ – ೬೩

೧೫. ಅದೇ ಪುಟ ಸಂಖ್ಯೆ – ೬೫

೧೬. ಅದೇ ಪುಟ ಸಂಖ್ಯೆ – ೬೫

೧೭. ಅದೇ ಪುಟ ಸಂಖ್ಯೆ – ೬೬

೧೮. ಅದೇ ಪುಟ ಸಂಖ್ಯೆ – ೭೨

೧೯. ಅದೇ ಪುಟ ಸಂಖ್ಯೆ – ೮೧

೨೦. ಅದೇ ಪುಟ ಸಂಖ್ಯೆ – ೮೩

೨೧. ಅದೇ ಪುಟ ಸಂಖ್ಯೆ – ೮೭

೨೨. ಅದೇ ಪುಟ ಸಂಖ್ಯೆ – ೮೭

೨೩. ಅದೇ ಪುಟ ಸಂಖ್ಯೆ – ೮೮

೨೪. ಅದೇ ಪುಟ ಸಂಖ್ಯೆ – ೮೯

೨೫. ಅದೇ ಪುಟ ಸಂಖ್ಯೆ – ೧೧೫

೨೬. ಅದೇ ಪುಟ ಸಂಖ್ಯೆ – ೧೧೬

೨೭. ಎಸ್.ಜಿ. ಸಿದ್ಧರಾಮಯ್ಯ, ಕೆ.ಆರ್. ಸಂಧ್ಯಾರೆಡ್ಡಿ., ೨೦೦೬, ***ಸುವರ್ಣ ಜನಪದ ಕಾವ್ಯ***, ಪುಟ ಸಂಖ್ಯೆ – ೬೧೫

೨೮. ಅದೇ ಪುಟ ಸಂಖ್ಯೆ – ೬೧೭

೨೯. ಅದೇ ಪುಟ ಸಂಖ್ಯೆ – ೬೧೮

೩೦. ಅದೇ ಪುಟ ಸಂಖ್ಯೆ – ೬೨೦

೩೧. ಅದೇ ಪುಟ ಸಂಖ್ಯೆ – ೬೨೧

೩೨. ಅದೇ ಪುಟ ಸಂಖ್ಯೆ – ೬೨೪

೩೩. ಅದೇ ಪುಟ ಸಂಖ್ಯೆ – ೬೨೫

೩೪. ಅದೇ ಪುಟ ಸಂಖ್ಯೆ – ೬೨೫

೩೫ ಅದೇ ಪುಟ ಸಂಖ್ಯೆ – ೬೨೯

೩೬. ಕೆ.ಎಂ. ಮೇತ್ರಿ (ಸಂ), ೨೦೦೫, ***ಎಲ್ಲಮ್ಮನ ಕಥನ ಕಾವ್ಯ***, ಪುಟ ಸಂಖ್ಯೆ – ೩

೩೭. ಅದೇ ಪುಟ ಸಂಖ್ಯೆ – ೪

೩೮. ಅದೇ ಪುಟ ಸಂಖ್ಯೆ – ೭

೩೯. ಅದೇ ಪುಟ ಸಂಖ್ಯೆ – ೮

೪೦. ಅದೇ ಪುಟ ಸಂಖ್ಯೆ – ೧೪

೪೧. ಅದೇ ಪುಟ ಸಂಖ್ಯೆ – ೨೧

೪೨. ಅದೇ ಪುಟ ಸಂಖ್ಯೆ – ೨೬

೪೩. ಅದೇ ಪುಟ ಸಂಖ್ಯೆ – ೩೩

೪೪. ಅದೇ ಪುಟ ಸಂಖ್ಯೆ – ೩೪

೪೫. ಅದೇ ಪುಟ ಸಂಖ್ಯೆ – ೩೭

೪೬. ಅದೇ ಪುಟ ಸಂಖ್ಯೆ – ೪೪

೪೭. ಅದೇ ಪುಟ ಸಂಖ್ಯೆ – ೪೫

೪೮. ಅದೇ ಪುಟ ಸಂಖ್ಯೆ – ೪೬

೪೯. ಅದೇ ಪುಟ ಸಂಖ್ಯೆ – ೪೯

೫೦. ಅದೇ ಪುಟ ಸಂಖ್ಯೆ – ೫೦

೫೧. ಅದೇ ಪುಟ ಸಂಖ್ಯೆ – ೫೦

೫೨. ಅದೇ ಪುಟ ಸಂಖ್ಯೆ – ೫೦

೫೩. ಅದೇ ಪುಟ ಸಂಖ್ಯೆ – ೫೨

೫೪. ಅದೇ ಪುಟ ಸಂಖ್ಯೆ – ೫೩

೫೫. ಅದೇ ಪುಟ ಸಂಖ್ಯೆ – ೫೬

೫೬. ಅದೇ ಪುಟ ಸಂಖ್ಯೆ – ೬೯

೫೭. ಅದೇ ಪುಟ ಸಂಖ್ಯೆ – ೬೭

೫೮. ಅದೇ ಪುಟ ಸಂಖ್ಯೆ – ೬೯

೫೯. ಅದೇ ಪುಟ ಸಂಖ್ಯೆ – ೭೦

೬೦. ಅದೇ ಪುಟ ಸಂಖ್ಯೆ – ೭೨

೬೧. ಅದೇ ಪುಟ ಸಂಖ್ಯೆ – ೭೪

೬೨. ಅದೇ ಪುಟ ಸಂಖ್ಯೆ – ೭೬

೬೩. ಅದೇ ಪುಟ ಸಂಖ್ಯೆ – ೭೮

೬೪. ಅದೇ ಪುಟ ಸಂಖ್ಯೆ – ೮೦

೬೫. ಅದೇ ಪುಟ ಸಂಖ್ಯೆ – ೮೨

೬೬. ಅದೇ ಪುಟ ಸಂಖ್ಯೆ – ೮೩
೬೭. ಅದೇ ಪುಟ ಸಂಖ್ಯೆ – ೮೫
೬೮. ಅದೇ ಪುಟ ಸಂಖ್ಯೆ – ೮೭
೬೯. ಅದೇ ಪುಟ ಸಂಖ್ಯೆ – ೮೮
೭೦. ಅದೇ ಪುಟ ಸಂಖ್ಯೆ – ೮೯
೭೧. ಅದೇ ಪುಟ ಸಂಖ್ಯೆ – ೯೦
೭೨. ಅದೇ ಪುಟ ಸಂಖ್ಯೆ – ೯೧
೭೩. ಅದೇ ಪುಟ ಸಂಖ್ಯೆ – ೯೫
೭೪. ಅದೇ ಪುಟ ಸಂಖ್ಯೆ – ೯೯
೭೫. ಅದೇ ಪುಟ ಸಂಖ್ಯೆ – ೧೦೦
೭೬. ಅದೇ ಪುಟ ಸಂಖ್ಯೆ – ೧೦೨
೭೭. ಅದೇ ಪುಟ ಸಂಖ್ಯೆ – ೧೦೩
೭೮. ಅದೇ ಪುಟ ಸಂಖ್ಯೆ – ೧೦೪
೭೯ ಅದೇ ಪುಟ ಸಂಖ್ಯೆ – ೧೦೫
೮೦. ಅದೇ ಪುಟ ಸಂಖ್ಯೆ – ೧೦೭
೮೧. ಅದೇ ಪುಟ ಸಂಖ್ಯೆ – ೧೦೮
೮೨. ಅದೇ ಪುಟ ಸಂಖ್ಯೆ – ೧೦೯
೮೩. ಅದೇ ಪುಟ ಸಂಖ್ಯೆ – ೧೧೦
೮೪. ಅದೇ ಪುಟ ಸಂಖ್ಯೆ – ೧೧೩
೮೫. ಅದೇ ಪುಟ ಸಂಖ್ಯೆ – ೧೧೭
೮೬. ಅದೇ ಪುಟ ಸಂಖ್ಯೆ – ೧೧೯
೮೭. ಅದೇ ಪುಟ ಸಂಖ್ಯೆ – ೧೨೨
೮೮. ಅದೇ ಪುಟ ಸಂಖ್ಯೆ – ೧೨೭
೮೯. ಅದೇ ಪುಟ ಸಂಖ್ಯೆ – ೧೧೨೯
೯೦. ಅದೇ ಪುಟ ಸಂಖ್ಯೆ – ೧೩೨
೯೧. ಅದೇ ಪುಟ ಸಂಖ್ಯೆ – ೧೪೫
೯೨. ಅದೇ ಪುಟ ಸಂಖ್ಯೆ – ೧೪೬
೯೩. ಅದೇ ಪುಟ ಸಂಖ್ಯೆ – ೧೪೭
೯೪. ಅದೇ ಪುಟ ಸಂಖ್ಯೆ – ೧೪೮
೯೫. ಅದೇ ಪುಟ ಸಂಖ್ಯೆ – ೧೪೯

# ಅಧ್ಯಾಯ : ನಾಲ್ಕು
# ಶಿಷ್ಟ ಮತ್ತು ಪರಿಶಿಷ್ಟ ಸಾಹಿತ್ಯದಲ್ಲಿ ಎಲ್ಲಮ್ಮ

ಸಾಹಿತ್ಯ ಎಂದರೆ ವ್ಯಕ್ತಿಗೆ ಆಗುವ ಅನುಭವಗಳ ಅಭಿವ್ಯಕ್ತಿಯೇ ಆಗಿದೆ. ಅದು ಲಿಖಿತ ರೂಪದಲ್ಲಾದರೂ ಇರಬಹುದು ಅಥವಾ ಮೌಖಿಕ ರೂಪದಲ್ಲಾದರೂ ಇರಬಹುದು. ಸಾಹಿತ್ಯವು ವ್ಯಕ್ತಿಗೆ ನಿತ್ಯ ನಿರಂತರ ಅನುಭವ, ಸುಖ, ದುಃಖ, ಘಟನೆಗಳನ್ನು ಅನೇಕ ವಿಧವಾದ ಅನುಭವಕ್ಕೆ ಬಂದು ಅದು ಜೀವನಾನುಭವ ಕೊಡುವಂತದ್ದಾಗಿರಬಹುದು. ಅಥವಾ ಸ್ವಲ್ಪ ಮನರಂಜನಾತ್ಮಕ ಆಗಿಯಾದರೂ ಇರಬಹುದು. ಒಟ್ಟಾರೆ ಅಭಿವ್ಯಕ್ತಿ ಮಾಧ್ಯಮವಾಗಿ ಸಾಹಿತ್ಯ ರೂಪುಗೊಳ್ಳುತ್ತದೆ.

ಸಾಹಿತ್ಯದ ಸೃಷ್ಟಿಯು ಒಂದು ಕಾಲಮಾನದ ಘಟನಾವಳಿ, ಅನುಭವ, ಅಭಿಪ್ರಾಯಗಳನ್ನು ಬೇರೊಬ್ಬರಿಗೆ ತಿಳಿಸಲು ಸಹಾಯಕವಾಗಿದೆ. ವ್ಯಕ್ತಿಗೆ ಆದಂತಹ ವಿವಿಧ ಅನುಭವ ಕಥೆ, ಕಾದಂಬರಿ, ಕಾವ್ಯ, ನಾಟಕ, ವಿಮರ್ಶೆ, ಹೋಲಿಕೆಗಳ ಮೂಲಕ ಕಟ್ಟಿಕೊಡುವುದಾಗಿದೆ. ಸಾಹಿತ್ಯವೆಂಬುದು ವ್ಯಕ್ತಿ ಹುಟ್ಟಿದಂದಿನಿಂದಲೂ ಸಾಯುವತನಕ ವ್ಯಕ್ತಿಗತವಾಗಿರುತ್ತದೆ. ಅವರವರ ಶಕ್ತಿಗೆ ಅನುಗುಣವಾಗಿ ಸಾಮರ್ಥ್ಯಕ್ಕೆ ತಕ್ಕಂತೆ ನಿರೂಪಿತವಾಗುವುದನ್ನು ನೋಡಬಹುದಾಗಿದೆ. ಇಂತಹ ಸಾಹಿತ್ಯವು ಎರಡು ಪ್ರಕಾರದಲ್ಲಿ ಮಾಡಿರುವುದನ್ನು ನೋಡಬಹುದಾಗಿದೆ.

೧. ಶಿಷ್ಟ ಸಾಹಿತ್ಯ

೨. ಪರಿಶಿಷ್ಟ ಸಾಹಿತ್ಯ

ಶಿಷ್ಟ ಸಾಹಿತ್ಯ ಎಂದರೆ ಗ್ರಂಥಸ್ತ ರೂಪದ ಸಾಹಿತ್ಯ ಪ್ರಕಾರವಾಗಿದ್ದು, ಅದು ಉತ್ತಮ ಬರಹ, ಸಾಹಿತ್ಯ ನಿರೂಪಣಾ ಕೌಶಲ್ಯ, ಉದ್ದೇಶಪೂರ್ವಕ ರಚನಾ ವಿನ್ಯಾಸ ಶೈಲಿಯಿಂದ ರಚನೆಗೊಳ್ಳುವುದಾಗಿದೆ. ಶಿಷ್ಟ ಸಾಹಿತ್ಯ ಸ್ವರೂಪವು ಕಾಲ ಕಾಲಕ್ಕೆ ಅನೇಕ ರೀತಿಯ ಬದಲಾವಣೆಗೆ ಒಳಪಟ್ಟು ರಚನೆಯಾಗುತ್ತದೆ. ಬದಲಾದ ಮನಸ್ಥಿತಿಗೆ ತಕ್ಕಂತೆ ಸಾಹಿತ್ಯ ರಚನಾ ಕ್ರಮ ಸೃಷ್ಟಿಯಾಗುತ್ತದೆ. ಒಟ್ಟಾರೆ ಶಿಷ್ಟ ಸಾಹಿತ್ಯ ಉದ್ದೇಶಪೂರ್ವಕವಾಗಿ ರಚನೆಯಾಗುತ್ತದೆ. ವಿದ್ವಾಂಸರು, ಬುದ್ಧಿ ಜೀವಿಗಳು, ಕವಿಗಳು ಕಲಿಕೆಯಲ್ಲಿ ಮುಂಚೂಣಿಯಲ್ಲಿರುವ ವ್ಯಕ್ತಿಗಳಿಂದ ಶಿಷ್ಟ ಜನ್ಮ ತಾಳುತ್ತದೆ ಎಂದೇ ಹೇಳಬಹುದಾಗಿದೆ.

ಪರಿಶಿಷ್ಟ ಸಾಹಿತ್ಯವು ಯಾವುದೇ ಬರಹ ರೂಪವಿಲ್ಲದೇ ಕೇವಲ ಬಾಯಿಮಾತಿನ ಸಾಹಿತ್ಯವಾಗಿದ್ದು, ಇದು ವ್ಯಕ್ತಿಯಿಂದ ವ್ಯಕ್ತಿಗೆ ವರ್ಗಾವಣೆ ಹೊಂದುತ್ತಾ ಸಾಗಿ ಬರುತ್ತದೆ. ಮೌಖಿಕ ಪರಂಪರೆಯು ಬರಹವಿಲ್ಲದೆ ಹಲವು ತಲೆಮಾರುಗಳಿಂದ ಕಥನ ಗೀತೆ ರೂಪದಲ್ಲಿ ಬಾಯಿಪಾಠದ ಮೂಲಕ ಉಳಿದು ಬಂದಿದೆ. ಮೌಖಿಕ ಸಾಹಿತ್ಯವು ಪರಿಣಿತ ಗಾಯಕರ ಪಕ್ಕದಲ್ಲೆ ಕುಳಿತು ಆಲಿಸುತ್ತಾ ಲಯ, ದಾಟಿ, ಗೇಯ, ಮಧುರತೆಯಿಂದ ಕೇಳುಗರಿಗೆ ಇಷ್ಟವಾಗುವಂತೆ ಕಥೆ, ಕವನ ಹೇಳುತ್ತಾರೆ ಅಥವಾ ಹಾಡುತ್ತಾರೆ. ಇಂಥಹ ಮೌಖಿಕ ಸಾಹಿತ್ಯದ ಗ್ರಂಥಸ್ತ ರೂಪಕ್ಕೆ ಬರಲು ದೇಶೀ ವಿದ್ವಾಂಸರು ಮತ್ತು ವಿದೇಶೀ ವಿದ್ವಾಂಸರು ಶ್ರಮಿಸಿದ್ದಾರೆ. ೧೮೭೧ಕ್ಕೆ ಮೊದಲೇ ಈ ರೀತಿಯ ಕಾರ್ಯ ನಡೆದಿದೆ.

ದೇಶೀ ವಿದ್ವಾಂಸರಾದ ಜೀ.ಶಂ.ಪ, ಸಿ.ಪಿ.ಕೆ, ಸೋಮಶೇಖರ ಇಮ್ರಾಪುರ, ನಂ. ತಪಸವೀಕುಮಾರ, ಅಂಬಳಿಕೆ ಹಿರಿಯಣ್ಣ, ಎ.ವಿ. ನಾವಡ, ವೀರಣ್ಣ ದಂಡೆ, ಪುರುಶೋತ್ತಮ ಬಿಳಿಮಲೆ, ಶ್ರೀರಾಮ ಇಟ್ಟಣ್ಣನವರ್ ಇನ್ನು ಮೊದಲಾದವರು ಜನಪದ ಸಾಹಿತ್ಯದಲ್ಲಿ ಕೆಲಸ ಮಾಡಿದ್ದಾರೆ. ಹಾಗೆಯೇ ಇವರಿಗೆ ಪೂರ್ವದಲ್ಲಿ ವಿದೇಶಿ ವಿದ್ವಾಂಸರಾದ ಬುಕಾನಿನ್, ಎಡ್ಗರ್ ಥರ್ಸ್ಟನ್, ಅಬ್ಬೆ ಬೋಯ್ಸ್, ಕೆ. ಮೆಕೆಂಜೆ, ಲೇಡನ್, ಮೋಗ್ಲಿಂಗ್, ಮೇರಿ ಫ್ರೋರೆ, ಗೋವರ್, ಕಿಟೆಲ್ ಮತ್ತು ಫ್ಲೀಟ್ ಮೊದಲಾದವರು ಅಧ್ಯಯನದ ಬರಹಗಳು ಮೌಖಿಕ ಸಾಹಿತ್ಯದ ಕುರಿತು ಚಿಂತನ ಮಂಥನ ಮಾಡಿದ್ದಾರೆ.

ಪರಿಶಿಷ್ಟ ಸಾಹಿತ್ಯದಲ್ಲಿ ಎಲ್ಲಮ್ಮನ ಕುರಿತು ಅನೇಕ ಚಿಂತನೆಗಳು ನಡೆಯುತ್ತಾ ಬಂದಿವೆ. ಆದಿವಾಸಿ ಸಮಾಜದಲ್ಲಿ ಹೆಣ್ಣಿಗೆ ಒಂದು ವಿಶಿಷ್ಟ ಸ್ಥಾನಮಾನ ಇರುತ್ತಿತ್ತು. ಆದಿವಾಸಿ ಸಮುದಾಯದವರು ಹೆಣ್ಣನ್ನು ಗೌರವ ಭಾವನೆಯಿಂದ ಕಾಣುತ್ತಿದ್ದರು. ಅದು ಮುಂದುವರೆದು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಬೆಳೆಯುತ್ತದೆ. ಈ ಮಾತ್ರಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿಗೆ ವಿಶೇಷ ಸ್ಥಾನಮಾನವಿದ್ದು ಕುಟುಂಬದ ನಿರ್ವಹಣೆ, ಜವಾಬ್ದಾರಿ, ಯಜಮಾನಿಕೆ ಹೆಣ್ಣಿನ ಕೈಯಲ್ಲಿರುತ್ತಿತ್ತು. ವಿವಾಹ ಸಂದರ್ಭದಲ್ಲಿ ಪುರುಷ ಸ್ತ್ರೀಯ ಮನೆಗೆ ಬಂದು ಜೀವಿಸುತ್ತಿದ್ದನು. ಈ ವ್ಯವಸ್ಥೆಯು ಕೆಲವೊಂದು ಬುಡಕಟ್ಟು ಸಮುದಾಯಗಳಲ್ಲಿ ಈಗಲೂ ಸಹ ಕಂಡು ಬರುತ್ತವೆ. ಮಾತೃಪ್ರಧಾನ ಕುಟುಂಬಗಳು ಹೆಣ್ಣಿನ ವ್ಯಕ್ತಿತ್ವ, ಅವಳಿಗೆ ಗೌರವದ ಭಾವನೆ ನೀಡುತ್ತಾ ಮುಂದುವರೆದು ದೇವರ ಕಲ್ಪನೆ ಕೊಟ್ಟರಲು ಸಾಧ್ಯವಾಗುತ್ತದೆ. ಪೌರಾಣಿಕ ಕಥೆಯಂತೆ ಎಲ್ಲಮ್ಮ ಕಾಶ್ಮೀರದ ರೇಣುಕ ರಾಜನಿಗೆ ಜನಿಸಿ ಜಮದಗ್ನಿಯ ಪತ್ನಿಯಾಗಿ ಬಾಳಿದವಳು. ಅವಳು ಮುಂದೆ ಜಗದಂಬೆ, ಆದಿಶಕ್ತಿ, ಎಲ್ಲಮ್ಮ, ರೇಣುಕೆ ಮೊದಲಾದ ಹೆಸರುಗಳಿಂದ ಪ್ರಸಿದ್ಧಳಾಗಿದ್ದಾಳೆ.

ಎಲ್ಲಮ್ಮ ತನ್ನ ಪತಿ ಜಮದಗ್ನಿಗೆ ಕುಷ್ಟರೋಗ ಬಂದಾಗ ಅವನ ಸೇವೆ ಮಾಡಿದ್ದು, ಅವನ ಉಳಿಸಿಕೊಳ್ಳಲು ಪ್ರಯತ್ನಿಸಿದ್ದು ರೋಗ ವಾಸಿಯಾಗದಿದ್ದಾಗ ಆ ರೋಗ ತಾನು ಸ್ವೀಕರಿಸಿ ಜಮದಗ್ನಿನ ಉಳಿಸಿದ್ದು ಅದು ಜನರಿಗೆ ಎಲ್ಲಮ್ಮಳ ಬಗ್ಗೆ ದೈವತ್ವದ ಕಲ್ಪನೆ ಮೂಡಿಸಿದೆ. ಎಲ್ಲಮ್ಮ ಬೇಡಿದ ವರಗಳ ಕೊಡುವ ಶಕ್ತಿ ದೇವಿಯಾಗಿದ್ದಾಳೆ. ದೇವಿಗೆ ಭಂಡಾರ, ಬೇವಿತಪ್ಪಲು, ನಿಂಬೆಹಣ್ಣು, ಹೂವ್ವಾ, ಕಾಯಿ, ಕರ್ಪೂರ ಅರ್ಪಿಸಿ ಭಕ್ತಿ ತೀರಿಸುವ ಜನರು ದೈವೀಕರಿಸಿ ದೇವಿನ ಪೂಜಿಸುತ್ತಾರೆ. ಜನಪದರು ದೇವಿಯ ಮೇಲಿನ ಅತಿಯಾದ ಭಕ್ತಿಯಿಂದಾಗಿ ದೇವರಿಗೆ ತಮ್ಮನ್ನು ಅರ್ಪಿಸಿಕೊಂಡು ಜೋಗತಿಯರಾಗಿ ಆರಾಧಿಸುತ್ತಾರೆ. ಈ ಹಿನ್ನಲೆಯಲ್ಲಿ ದೇವದಾಸಿ ಪದ್ಧತಿಯು ಹುಟ್ಟಿಕೊಂಡಿದೆ. ದೇವರ ಹೆಸರಿನಲ್ಲಿ ತಮ್ಮನ್ನು ಸಮಾಜಕ್ಕೆ ಸಮುದಾಯಕ್ಕೆ ಅರ್ಪಿಸಿಕೊಂಡಿದ್ದಾರೆ. ಜನರ ಮುಗ್ಧತೆಯು ದೈವವಾಗಿ ಎಲ್ಲಮ್ಮಳ ಆರಾಧಿಸುವಿಕೆ ಮನೋಹಕವಾಗಿದ್ದು ತಮ್ಮ ಉತ್ಸವ, ಜಾತ್ರೆ, ಸಂಭ್ರಮದ ಆಚರಣೆಗಳಲ್ಲಿ ತಮ್ಮ ಕರುಳ ಬಳ್ಳಿಯವರೆಲ್ಲ ಸೇರಿ ಕಷ್ಟ-ಸುಖ ಹಂಚಿಕೊಂಡು ನಲಿಯುತ್ತಾರೆ. ಈ ಸಂಭ್ರಮವು ಇಂದಿಗು ಸವದತ್ತಿ, ಹುಲಿಗಿ, ಉಚ್ಚಂಗಿ ಗುಡ್ಡಗಳ ಆಚರಣೆಗಳು ಇದಕ್ಕೆ ಸಾಕ್ಷಿಯೆಂಬಂತೆ ಕಂಡು ಬರುತ್ತವೆ.

ಜನಪದ ಸಾಹಿತ್ಯವು ಭೂಮಿ, ಸೂರ್ಯ, ಇತರ ಗ್ರಹಗಳು ಪ್ರಪಂಚದ ಸೃಷ್ಟಿಯ ಜೊತೆಗೆ ಕಾಲಕ್ರಮದಲ್ಲಿ ಮಾನವನ ಉಗಮವಾದ ನಂತರ ಮಾನವ ತನ್ನ ಭಾವನೆ, ಅನುಭವಗಳ ಅಭಿವ್ಯಕ್ತಿಯ ಫಲವಾಗಿ ಸೃಷ್ಟಿಯಾಗಿದೆ. ಮೊದ ಮೊದಲು ಹಾಸ್ಯ, ಮನರಂಜನೆ, ಬೇಸರ ಕಳೆಯಲೆಂದು ಕೆಲವು

ಸಣ್ಣ ಪುಟ್ಟ  ಕಥೆ, ಕಾವ್ಯ ಹಾಸ್ಯ ಕಾರ್ಯಕ್ರಮಗಳು ನಡೆಯುತ್ತಿದ್ದವು. ನಂತರದ ಕಾಲಮಾನದಲ್ಲಿ ಜನನ ಕಾರ್ಯಕ್ರಮ, ಹಬ್ಬ,-ಹರಿದಿನಗಳು, ವಿವಾಹ ಮುಹೂರ್ತಗಳು, ಸಾಂಸ್ಕೃತಿಕ ಘಟನಾವಳಿಗಳ ಸಂದರ್ಭದಲ್ಲಿ ವಿನೋದ ಕಾರ್ಯಗಳಲ್ಲಿ ಸೋಬಾನೆ, ಲಾವಣಿ ಗೀತೆ, ಒಗಟು, ಗಾದೆ ಮಾತುಗಳು, ಸಾಂಸ್ಕೃತಿಕವಾದ ಚಟುವಟಿಕೆಗಳ ಸಂದರ್ಭದಲ್ಲಿ ತಮಗೆ ಇಷ್ಟವಾದ ವ್ಯಕ್ತಿಗಳನ್ನು ಪ್ರಭಾವಿ ಘಟನಾವಳಿಗಳ ಕುರಿತು ಕಥನ ಕಾವ್ಯಗಳ ಸೃಷ್ಟಿಸಿ ತಮ್ಮ ಅನುಭವದಂತೆ ಅವುಗಳ ಸ್ವಲ್ಪ ಮನೋಹರವಾಗಿ ವರ್ಣಿಸಿ ಹೇಳುವ ಪದ್ಧತಿ ರೂಢಿಸಿಕೊಂಡರು. ಜನಪದ ಮೂಲ ಹುಡುಕುತ್ತಾ ಹೋದಂತೆ ಅದು ತಳಸಂಸ್ಕೃತಿ ಎನಿಸಿಕೊಂಡಿರುವ ಹಳ್ಳಿಗಳ ಸಾಂಸ್ಕೃತಿಕ ಚಟುವಟಿಕೆಗೆ ಹೋಗುತ್ತದೆ. ಜನಪದ ಸಾಹಿತ್ಯ ಜನರು ಹಾಡುವ, ರೂಢಿಸಿಕೊಂಡಿರುವ ಸಾಂಪ್ರದಾಯಿಕ ಹವ್ಯಾಸಿ ಕಲೆಯಾಗಿದ್ದು, ವಿಶೇಷ ಸಂದರ್ಭದಲ್ಲಿ ಸಾಮುದಾಯಿಕವಾಗಿ ಈ ಜನಪದ ಪ್ರಕಾರಗಳನ್ನು ಬೆಳೆಸಿ ಹಾಡುವರು. ಇದು ಅಲ್ಲದೆ ಕೆಲವು ವಿರಾಮದ ಸಮಯದಲ್ಲಿ ಮನರಂಜನೆಗೆಂದು ಕೋಲಾಟ, ಭಜನೆ ಪದಗಳು, ಲಾವಣಿಗಳು ಹಾಡುತ್ತಾರೆ. ಹಬ್ಬ-ಹರಿದಿನಗಲ ಸಂದರ್ಭದಲ್ಲಿ ಡೊಳ್ಳಿನ  ಮೇಳ, ನಂದಿಕೋಲು ಕುಣಿತ, ವಿವಾಹಗಳು, ಸಾಂಸ್ಕೃತಿಕ ಚಟುವಟಿಕೆಗಳು, ಹಬ್ಬಗಳಲ್ಲಿ ಸೋಬಾನೆ, ಗೀಗೀ ಪದ, ಕಾವ್ಯಗಳ ಹಾಡುತ್ತಾರೆ. ಜನಪದವು ಕಥೆ, ನೀತಿ, ಗಾದೆ, ಲಾವಣಿ ಮೊದಲಾದ ಸಂಪ್ರದಾಯ ಆಚರಣೆ, ಕುಣಿತ, ಆಟಪಾಟ, ನಂಬಿಕೆ, ಪೂಜೆ ಮುಂತಾದವು ಕ್ರಿಯೆಗೆ ಮಾಧ್ಯಮವಾಗುತ್ತದೆ. ಇವೆಲ್ಲವೂ ಜನಪದ ಸಂಸ್ಕೃತಿಯ ಅಂಗವಾಗಿವೆ.  ಸಮಸ್ತ ಜನಪದ ಸಂಸ್ಕೃತಿಯ ತಿಳಿವಳಿಕೆಯೇ ಜಾನಪದ ಎಂದು ಹೇಳಬಹುದಾಗಿದೆ. ಇಂತಹ ಜನಪದ ಸಾಹಿತ್ಯದಲ್ಲಿ ಕಥೆಗಳು, ಗೀತೆಗಳು, ಕಾವ್ಯಗಳು, ನಾಟಕಗಳು, ಗಾದೆಗಳು, ಒಗಟುಗಳು, ಕಥನ ಕಾವ್ಯಗಳು, ಮೊದಲಾದ ಅನೇಕ ಪ್ರಕಾರಗಳನ್ನು ಗುರುತಿಸಬಹುದಾಗಿದೆ. ಅದರಲ್ಲಿ ಮುಖ್ಯವಾಗಿ ಕಥನ ಕಾವ್ಯಗಳು ಪ್ರಮುಖವಾಗಿ ಕಂಡು ಬರುತ್ತವೆ. ಕಥನ ಕಾವ್ಯಗಳೆಂದರೆ ಜನಪದರು ವಿಶೇಷವಾಗಿ ಒಂದು ಕಥೆಯನ್ನು ಕಾವ್ಯದ ಮೂಲಕ ಹೇಳಿ ಕೇಳುಗರಿಗೆ ಇಷ್ಟವಾಗುವಂತೆ ಗೇಯ, ಮಧುರವಾಗಿ ಹೇಳುವ ಕಲೆಯಾಗಿದೆ.

ಕಥನ ಕಾವ್ಯಗಳು ವಿಶೇಷವಾಗಿ ಒಬ್ಬ ವ್ಯಕ್ತಿಯ ಘಟನೆಗಳ ಸುತ್ತಲೂ ಇರುವಂತಹ ಕತೆಯಲ್ಲಿ ಸುದೀರ್ಘವಾಗಿ ಅಥವಾ ಕಾಲಮಾನಕ್ಕೆ ತಕ್ಕಂತೆ ಒಂದೆಡೆ ಸೇರಿದ ಸಮುದಾಯದಲ್ಲಿ ಭಕ್ತರೊಬ್ಬರು ಮನರಂಜನಾತ್ಮಕವಾಗಿ ಕಾವ್ಯ ಹಾಡುತ್ತಾರೆ. ಅವರಿಗೆ ಸಹಾಯಕವಾಗಿ ಹಿಮ್ಮೇಳದಂತೆ ಕೆಲವು ವ್ಯಕ್ತಿಗಳು ಧ್ವನಿಗೂಡಿಸಿ ಕಾವ್ಯ ಬೆಳೆಸುವ ಕಲೆ ಇದಾಗಿದೆ. ಕಥನ ಕಾವ್ಯಗಳಲ್ಲಿ ಹೇಳುವ ಕಥೆಯು ಸಾಮಾನ್ಯ ಭಾಷೆಯಲ್ಲಿ ಕಾಲಕಾಲಕ್ಕೆ ಬದಲಾವಣೆ ಹೊಂದುತ್ತಾ ಕಾವ್ಯ ಮುಂದುವರೆಯುತ್ತದೆ. ಅನೇಕ ಜನಪದ ಕಾವ್ಯಗಳು ಇಂದು ಲಿಖಿತ ರೂಪಕ್ಕೆ ತಿರುಗಿರುವುದನ್ನು ನೋಡಬಹುದಾಗಿದೆ. ಇದು ವಿಶ್ವವಿದ್ಯಾಲಯಗಳ ವಿದ್ವಾಂಸರು ಜಾನಪದ ಅಕಾಡೆಮಿಗಳ ಪರಿಶ್ರಮವು ಈ ನಿಟ್ಟಿನಲ್ಲಿ ಸಾಗುತ್ತಿದೆ. ಮೌಖಿಕ ಪರಂಪರೆಯು ಗ್ರಂಥಸ್ಥ ರೂಪಕ್ಕೆ ತಿರುಗಿ ಇಂದಿನ ಮತ್ತು ಮುಂದಿನ ಪೀಳಿಗೆಗೆ ಸಹಾಯಕವಾಗಿದೆ. ಇಂತಹ ಜನಪದ ಕಾವ್ಯ ಸ್ವರೂಪವು ಈ ಕೆಳಗಿನಂತೆ ಕಾಣಬಹುದಾಗಿದೆ.

### ೪.೧ ಜನಪದ ಕಾವ್ಯ ಸ್ವರೂಪ

ಜನಪದ ಸಾಹಿತ್ಯ ಮಾನವನ ಸಂಸ್ಕೃತಿಯ ಸಮಸ್ತ ವಿಷಯಗಳನ್ನು ಒಳಗೊಂಡಿರುತ್ತದೆ. ಮಾನವನ

ಅಂತರಂಗ ಮತ್ತು ಬಹಿರಂಗಗಳ ಸಾಮಾಜಿಕ ಪರಂಪರೆಯ ಅನಾವರಣ ಮಾಡುವ ಕಾರ್ಯ ಮಾಡುತ್ತದೆ. ವ್ಯಕ್ತಿಯ ಅಭಿವ್ಯಕ್ತಿ ಸಾಧನವಾಗಿ ಜನಪದ ಸಾಹಿತ್ಯ ಕಾರ್ಯ ಮಾಡುತ್ತದೆ. ಮಾನವ ವಿಕಾಸಕ್ಕೆ ಸಂಬಂಧಿಸಿದ ಹೊಸ ಹೊಸ ವಸ್ತುಗಳು, ಚಿತ್ರಗಳು ಭಾಷೆಯ ಮೂಲಕ, ಸನ್ನೆಗಳ ಮೂಲಕ, ಹಾಡು, ಕುಣಿತ, ಆಚಾರ-ವಿಚಾರಗಳನ್ನು ವ್ಯಕ್ತಪಡಿಸುವುದಾಗಿದೆ. ಜನಪದ ಸಂಸ್ಕೃತಿಯು ಒಬ್ಬನ ಸೃಷ್ಟಿಯಿಂದ ಅದು ಹಲವಾರು ವ್ಯಕ್ತಿಗಳ ಮೂಲಕ ಬೆಳೆದು ಬರುತ್ತದೆ. ಜನಪದ ಸಾಹಿತ್ಯಕ್ಕೆ ಸಂಪ್ರದಾಯಗಳು, ನಂಬಿಕೆಗಳು, ಹಾಡುಗಳು, ಕುಶಲ ಕೈಗಾರಿಕೆ ಮುಂತಾದವುಗಳು ಮಾನವನಿಗೆ ತಿಳುವಳಿಕೆ ಜ್ಞಾನವನ್ನು ಜನಪದ ಸಂಸ್ಕೃತಿಗೆ ಒಳಪಡಿಸುತ್ತವೆ. ಜನಪದ ಸಂಸ್ಕೃತಿ ಮತ್ತು ಶಿಷ್ಟ ಸಂಸ್ಕೃತಿಗಳು ಅನೇಕ ಸಂದರ್ಭಗಳಲ್ಲಿ ಒಂದೇ ಎಂಬುವಂತೆ ಕಂಡರೂ ಸಹ ನಿರ್ದಿಷ್ಟಪಡಿಸಲು ಸಾಧ್ಯವಾಗದೇ ಇರಬಹುದಾಗಿದೆ. ಶಿಷ್ಟ ಸಂಸ್ಕೃತಿಗೆ ಸಿಕ್ಕಿ ತಮ್ಮ ಬದುಕಿನಲ್ಲಿ ನಲುಗಿದವರ ಸಂಸ್ಕೃತಿಯನ್ನು ಕಾಣಬಹುದಾಗಿದೆ. ನಗರಗಳು ಬೆಳೆದಂತೆ ಗ್ರಾಮಗಳು ಕುಗ್ಗುತ್ತಾ, ಗ್ರಾಮೀಣ ಸಂಸ್ಕೃತಿ ನಾಶವಾಗುತ್ತಾ ಸಾಗುತ್ತದೆ. ಒಂದು ರೀತಿಯಲ್ಲಿ ಯೋಚಿಸಿದರೆ ಜನಪದ ಸಂಸ್ಕೃತಿಯು ಸತ್ವಯುತವಾಗಿದ್ದು, ಪರಸ್ಪರ ವಿನಿಮಯ ಸಹಕಾರ ಗುಣಗಳ ಆಗರವಾಗಿರುವುದನ್ನು ನೋಡಬಹುದಾಗಿದೆ. ಇಂತಹ ಮನಸ್ಥಿತಿಗಳ ಒಡೆಯುವ ಕಾರ್ಯ ನಗರೀಕರಣಗಳಿಂದ ಉದ್ವಿಗ್ನಗೊಳ್ಳುತ್ತದೆ ಎಂದೇ ಹೇಳಬಹುದಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಆಧುನೀಕರಣ ಪ್ರವೇಶಿಸಿದ ನಂತರ ಜಾನಪದ ತನ್ನ ಬಲವನ್ನು ಕಳೆದುಕೊಳ್ಳುತ್ತಿದ್ದರೂ ಸಹ ಇನ್ನೂ ಸ್ಪಷ್ಟವಾದ ತನ್ನ ಛಾಯೆಯನ್ನು ನಂಬಿಕೆಗಳು, ಗಾದೆ, ಒಗಟು, ಕತೆ, ಗೀತೆ, ಲಾವಣಿಗಳು, ಆಟ, ಕೂಟ, ಕೋಲಾಟಗಳು, ವೈದ್ಯ, ಮಾಟ, ಮಂತ್ರ ಮೊದಲಾದವುಗಳು ಜೀವಂತವಾಗಿಯೆ ಉಳಿದಿವೆ. ಕಂಠಸ್ತವಾಗಿ ಜನಪದರ ಜೀವನಾಡಿಯಾಗಿ ಜನಪದ ಸಾಹಿತ್ಯ ಉಳಿದುಕೊಂಡು ಮುಂದುವರೆಯುತ್ತಾ ಸಾಗುತ್ತದೆ. ಶಿಷ್ಟ ಸಾಹಿತ್ಯಕ್ಕೆ ತಾಯಿಬೇರಾಗಿ ಉಳಿದಿದೆ. ಆದಿವಾಸಿಗಲು, ಗಿರಿಜನರು, ನಾಗರೀಕ ಸಮಾಜದಿಂದ ದೂರ ಉಳಿದ ಹಳ್ಳಿಗಳಲ್ಲಿ ಈ ಸಂಸ್ಕೃತಿ ಈಗಲೂ ಶುದ್ಧವಾಗಿಯೇ ಇದೆ

**ಜನಪದ ಸಾಹಿತ್ಯದ ಸೃಷ್ಟಿಕಾರ್ಯ**

* ಒಂದೇ ಮೂಲಕ್ಕೆ ಸೇರಿದ, ಒಂದೇ ಪ್ರದೇಶದ, ಒಂದೇ ಜನಾಂಗದ ಗುಂಪು, ಮೂಲ ನಿವಾಸಿಗಳು ಅವರ ರಾಜಕೀಯ, ಸಾಮಾಜಿಕ ವ್ಯವಸ್ಥೆಗಳ ಕಟ್ಟಿಕೊಡುವುದು

* ಜನಾಂಗ, ಭಾಷೆ, ಧರ್ಮಗಳಲ್ಲಿ ಬದ್ಧರಾದ ಒಂದು ಪ್ರಜಾ ಸಮೂಹದ ಸಮಾಜದ ಕೆಳಸ್ತರ, ತನ್ನದೇ ಆದ ಒಂದು ಸಮುದಾಯದ ಕಲೆ, ಸಂಪ್ರದಾಯ, ಐತಿಹ್ಯ, ನಂಬಿಕೆಗಳನ್ನು ತಲೆಮಾರಿನಿಂದ ತಲೆಮಾರಿಗೆ ಸಾಗಿಸುವ ಕಾರ್ಯ ನಡೆಯುತ್ತದೆ.

* ಒಂದು ರಾಜ್ಯದ, ಒಂದು ದೈವದ, ಒಂದು ಮಠದ, ಒಬ್ಬ ಸಾಂಸ್ಕೃತಿಕ ನಾಯಕನ ಪ್ರಭಾವ ಹಾಗೂ ವ್ಯಾಪ್ತಿಗೆ ಒಳಗಾದ ಜನರ ಮೊತ್ತದ ಗಣಿಯಾಗಿದೆ.

* ದೇಶದ ಜನಪದ ಸಾಮುದಾಯಿಕ ಸಾಂಸ್ಕೃತಿಕವಾದ ಚಟುವಟಿಕೆಗಳ ಆಚರಣೆಗಳು.

* ಜನಪದ ಸಾಹಿತ್ಯ ಸೃಷ್ಟಿಗೆ ಜಾಣ್ಮೆ, ವಿದ್ವತ್ತು, ಸಮಾಲೋಚನೆ ಮುಂತಾದ ಜ್ಞಾನಕಾಂಡಗಳ ಒಳಗೊಂಡ ವ್ಯಕ್ತಿಯಿಂದ ಸೃಷ್ಟಿಯಾಗಿ ಅದು ಮುಂದುವರೆಯುತ್ತದೆ.

* ಜನಪದ ಕಾವ್ಯವೊಂದನ್ನು ಅನುಸರಿಸಿ ಶಿಷ್ಟ ಕಾವ್ಯಗಳು ಸೃಷ್ಟಿಯಾಗುತ್ತವೆ. ಉದಾರಹಣೆಗೆ ವಡ್ಡಾರಾಧನೆಯ ಕಥೆಗಳು, ರಾಘವಾಂಕನ ಕಾವ್ಯದ ಕೆಲವು ಸನ್ನಿವೇಶಗಳು, ನಳಚರಿತ್ರೆ ಇದಕ್ಕೆ ಒಳ್ಳೆಯ ನಿದರ್ಶನ ಎಂದು 'ಹಾರ್ಮನ್' ತಿಳಿಸುತ್ತಾರೆ. "ಪ್ರೌಢ ಕಾವ್ಯಗಳಿಂದ ಜನಪದ ಕಾವ್ಯಗಳು ಪ್ರಭಾವಿತವಾಗಿರುವುದು ವಿರಳವಾದರೂ ಜನಪದದ ಆವರಣದಲ್ಲಿ ಅಂತ ಕಾವ್ಯ ಬರೆಯ ಬೇಕಾದರೆ ಅದು ಕಂಠಸ್ಥ ಸಂಪ್ರದಾಯಕ್ಕೆ ಬರಬೇಕು. ಹಾಗೆ ಬಂದಕೂಡಲೇ ಕಾಲಕ್ರಮದಲ್ಲಿ ಅದು ಮೂಲದ ಅನೇಕ ಅಂಶಗಳನ್ನು ಕಳೆದುಕೊಂಡು ಹೊಸ ರೂಪವನ್ನು ಪಡೆಯುತ್ತಾ ಸಾಗುತ್ತದೆ" [೧]

'ಚಾರ್ಲ್ಸ್ ಫ್ರಾನ್ಸಿಸ್ ವಾಟರ್' ಅವರು ಹೇಳುವಂತೆ "ಜಾನಪದ ಸುಲಭವಾಗಿ ಸಾವನ್ನಪ್ಪುವುದಿಲ್ಲ, ತನ್ನ ಉಳಿವಿಗಾಗಿ ನಿರಂತರವಾಗಿ ಹೋರಾಡುತ್ತದೆ. ಒಂದು ಕಡೆ ಕಣ್ಮರೆಯಾದರೂ ಮತ್ತೊಂದು ಕಡೆ ತಲೆ ಎತ್ತಿಕೊಳ್ಳುತ್ತದೆ. ಅದರ ಯಾವುದೋ ಪ್ರಕಾರ ತನ್ನ ಪ್ರಖರತೆಯನ್ನು ಕಳೆದುಕೊಂಡರೆ ಇನ್ನೊಂದು ಪ್ರಕಾರ ಹೊಸ ರೂಪಿನಲ್ಲಿ ಜನ ಜೀವನವನ್ನು ತಬ್ಬುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ" ಎಂದಿದ್ದಾರೆ.

ಜನಪದ ಸಾಹಿತ್ಯವು ಪುರಾಣ, ಐತಿಹ್ಯಗಳು, ಕಥೆಗಳು, ಗಾದೆಗಳು, ಒಗಟುಗಳು, ಗೀತೆಗಳು ಮತ್ತು ಇತರ ಕಲಾತ್ಮಕ ಅಭಿವ್ಯಕ್ತಿಗಳನ್ನು ಜಾನಪದ ಒಳಗೊಂಡಿರುತ್ತದೆ. ಕೆಲವು ಜನಪದ ತಜ್ಞರು ನಂಬಿಕೆಗಳು, ಸಂಪ್ರದಾಯಗಳು, ಕಲೆ, ಕುಶಲ ಕೈಗಾರಿಕೆ, ಮನೆಯ ಮಾದರಿ, ವೇಷಭೂಷಣ, ಆಹಾರ ವಿಷಯಗಳು ಮೊದಲಾದ ಅಂಶಗಳು ಜನಪದಕ್ಕೆ ಬೆರೆತಿರುವುದನ್ನು ತಿಳಿಸುತ್ತಾರೆ. ಇಂತಹ ಜನಪದ ಸಾಹಿತ್ಯ ಸ್ವರೂಪದಲ್ಲಿ ಜನಪದ ಕಾವ್ಯಗಳು ಸಹ ತನ್ನದೇ ಆದ ವಿಶಿಷ್ಟ ಸ್ವರೂಪ ಮೂಡಿಸಿರುವುದನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

* ಜನಪದ ಕಾವ್ಯಗಳ ಸ್ವರೂಪ, ವ್ಯಾಪ್ತಿ ವಿಶಾಲವಾಗಿದ್ದು, ತನ್ನದೇ ಆದ ಮಹತ್ವದಿಂದ ಕಂಠಸ್ಥ ಪರಂಪರೆಯಿಂದ ಕೂಡಿರುತ್ತದೆ. ಜನಪದ ಕಾವ್ಯಗಳು ವಿಶಿಷ್ಟ ವ್ಯಕ್ತಿಯ, ಸಮುದಾಯದ ಸಾಂಸ್ಕೃತಿಕ ಘಟನೆ, ಸಾಮಾಜಿಕ ಸ್ಥಿತಿಗತಿ, ಸಾಂಪ್ರದಾಯಿಕ ಗುಂಪಿನ ವಿಶಿಷ್ಟ ಆಚರಣೆಗಳು, ನಂಬಿಕೆಗಳು, ಆಚಾರ-ವಿಚಾರಗಳ ಕುರಿತಾಗಿ ಪ್ರಭಾವಿ ವ್ಯಕ್ತಿ, ಐತಿಹಾಸಿಕ, ಪೌರಾಣಿಕ ಪುರುಷರ ಕುರಿತಾದ ಜನರ ನಂಬಿಕೆಯಲ್ಲಿನ ಮೌಖಿಕ ಕಾವ್ಯಗಳು ಇವಾಗಿವೆ.

* ಜನಪದ ಕಾವ್ಯಗಳು ಕಂಠಸ್ಥವಾಗಿ ಸಾಮೂಹಿಕವಾಗಿ ಸೃಷ್ಟಿಯಿಂದ ರಚನೆಯಾಗಿದ್ದು, ಸಮುದಾಯವೊಂದರ ಬಗ್ಗೆ ಇರಿಸಿಕೊಂಡಿರುವ ನಂಬಿಕೆಗಳ ಪ್ರತಿಫಲನವಾಗಿ ಕಾವ್ಯಗಳು ಕಂಡು ಬರುತ್ತವೆ.

* ಜನಪದ ಕಾವ್ಯಗಳು ಪ್ರಾದೇಶಿಕ ಮಹತ್ವದ ಅಂಶಗಳು ತಲೆಮಾರಿನಿಂದ ತಲೆಮಾರಿಗೆ ಹಾಡಿನ ಮೂಲಕ ಸಾಗಿ ಬರುತ್ತವೆ. ಇದು ವ್ಯಕ್ತಿ ವ್ಯಕ್ತಿಗೆ ಬಾಯಿಪಾಠದಿಂದ ಮುಂದುವರೆಯುತ್ತಾ ಸಾಗುತ್ತವೆ.

* ಕಾವ್ಯಗಳಲ್ಲಿ ಸಾಂಸ್ಕೃತಿಕ ನಾಯಕ, ಅವನ ವ್ಯಕ್ತಿತ್ವ, ಜೀವನ, ಸಾಧನೆಗಳ ಕುರಿತಾಗಿ

ಮನರಂಜನಾತ್ಮಕವಾಗಿ, ಮೋಹಕವಾಗಿ, ರಂಜನೀಯವಾಗಿ ವರ್ಣಿಸುತ್ತಾ ಹಾಡಿ ಹೊಗಳುತ್ತಾರೆ.

* ಉತ್ಸವ, ಹಬ್ಬ, ವಿವಾಹ, ಶುಭ ಸಮಾರಂಭಗಳಲ್ಲಿ ಇಂತಹ ಕಾವ್ಯದ ಸ್ಮರಣೆ, ಹಾಡುವಿಕೆ, ಕಾವ್ಯಗಳಿಗೆ ತಾಳ ಮೇಳಗಳನ್ನು ಜೋಡಿಸಿ ಲಯಬದ್ಧವಾಗಿ ಹಾಡಿ ನಲಿಯುತ್ತಾರೆ.

* ಜನಪದ ಕಾವ್ಯಗಳಲ್ಲಿ ಅವತಾರ ಪುರುಷರು, ಐತಿಹಾಸಿಕ ವ್ಯಕ್ತಿಯನ್ನು ದೈವೀಕರಿಸಿ, ಭಯ, ಭಕ್ತಿಯಿಂದ ಅವತಾರ ಪುರುಷನ ಕುರಿತಾಗಿ ವರ್ಣಿಸುತ್ತಾರೆ. ಈ ಕಾವ್ಯಗಳನ್ನು ವಿಶೇಷ ದಿನಗಳಲ್ಲಿ ರಾತ್ರಿ ವೇಳೆ, ಕೆಲಸದ ಸಂದರ್ಭದಲ್ಲಿ, ಕುಟ್ಟುವಾಗ, ಬೀಸುವಾಗ, ನಾಟಿ ಮಾಡುವಾಗ ಮೊದಲಾದ ಸಂದರ್ಭಗಳಲ್ಲಿ ಹಾಡುತ್ತಾರೆ.

* ಒಂದು ನಿರ್ದಿಷ್ಟ ಸಮುದಾಯದ ಸಾಂಸ್ಕೃತಿಕ ನಾಯಕನ ಬಗೆಗಿನ ಸಮುದಾಯದವರ ಆಚರಣೆಯ ಗಣಿಯಾಗಿ ಈ ಕಾವ್ಯಗಳು ಕಂಡು ಬರುತ್ತವೆ. ಉದಾರಹಣೆಗೆ ಮಂಟೇಸ್ವಾಮಿ ಕಾವ್ಯ, ಜುಂಜಪ್ಪ, ಯತ್ತಪ್ಪ ಕಾವ್ಯ, ಎಲ್ಲಮ್ಮನ ಕಾವ್ಯ, ಮೈಲಾರಲಿಂಗನ ಕಾವ್ಯ ಮೊದಲಾದ ಕಾವ್ಯಗಳ ಸ್ವರೂಪವನ್ನು ಗಮನಿಸಬಹುದಾಗಿದೆ.

"ಸಮಾಜದ ಎಲ್ಲಾ ಸಮುದಾಯಗಳ ಜ್ಞಾನ ಸಂಗ್ರಹಣೆ, ಸಂಪಾದನೆ, ಕಲಿಕೆ, ಪ್ರದರ್ಶನ ಕಾವ್ಯಗಳ ತೀವ್ರಗತಿಯಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಪ್ರಬುದ್ಧಮಾನವಾಗಿ ಜನಪದ ಕಾವ್ಯಗಳು ಮೂಡಿ ಬರುತ್ತವೆ."[೨] ಜನಪದ ಸಾಹಿತ್ಯದಲ್ಲಿ ಕಾವ್ಯಗಳಿಗೆ ಮತ್ತು ಗೀತೆಗಳಿಗೆ ವಿಶಿಷ್ಟವಾದ ಸ್ಥಾನವಿದ್ದು ಕೇಳುಗರ ಗಮನ ಸೆಳೆಯುವಂತೆ ಇದ್ದು, ಹೆಚ್ಚಿನ ಕಾವ್ಯಗಳನ್ನು ಸ್ತ್ರೀಯರು ಹಾಡಿರುವುದನ್ನು ನೋಡಬಹುದು. ಅದರಲ್ಲೂ ಮುಖ್ಯವಾಗಿ ತಳಸಮುದಾಯ ಎನಿಸಿಕೊಂಡಿರುವ ಸಮುದಾಯದ ಸ್ತ್ರೀಯರು ತಮ್ಮ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಲನ್ನು ಅರಿಯಲು ಕಾವ್ಯಗಳ ಮೂಲಕ ತಮ್ಮ ಸಂಸ್ಕೃತಿ ಬಿತ್ತರಿಸುತ್ತಾರೆ.

ಸಾಮಾನ್ಯವಾಗಿ ಜನಪದ ಕಾವ್ಯಗಳು ಗಾಯಕರಿಂದ ಸೃಷ್ಟಿಯಾಗಿದ್ದು, "ಸುದೀರ್ಘವಾಗಿ ಕಾವ್ಯಗಳನ್ನು ಹಾಡುತ್ತಾ ತಲೆಮಾರಿನಿಂದ – ತಲೆಮಾರಿಗೆ ಆ ಕಾವ್ಯಗಳನ್ನು ಒಯ್ಯುತ್ತಾ ತಮ್ಮದೇ ಆದ ಹಾಡುಗಾರಿಕೆಯ ಸಂಪ್ರದಾಯವನ್ನು ಕಾವ್ಯ ಪರಂಪರೆಯನ್ನು ಹೊಂದಿರುವ ಸಮೂಹವೇ ವೃತ್ತಿಗಾಯಕರೆಂದು"[೩] ಸಾಮಾನ್ಯ ಗಾಯಕರು ತಾವು ಕಲಿತ ಹಾಡನ್ನು ತಮ್ಮ ತಮ್ಮಲ್ಲೇ ಹಾಡಿಕೊಳ್ಳುತ್ತಾರೆ. ಅವರಿಗೆ ನಿರ್ದಿಷ್ಟವಾದ ಶ್ರೋತೃವರ್ಗ ಇರುವುದಿಲ್ಲ. ಅದು ಅವರ ಕೆಲಸದ ಆಯಾಸವನ್ನು ನೀಗಿಸಿಕೊಳ್ಳಲು ಮನಸ್ಸಿನ ಬೇಸರವನ್ನು ಕಳೆಯಲು ಹಾಡಿಕೊಳ್ಳಬಹುದಾದ ಹಾಡು ಕಾವ್ಯ ಆಗಿರುತ್ತದೆ.

ಜನಪದ ಕಾವ್ಯ ಸೃಷ್ಟಿಸಿ ಹಾಡುವ ವಕ್ತರು ತಮ್ಮ ಕಾವ್ಯದ ನಾಯಕನ ಹೆಸರಿನ ಮೂಲಕವೇ ಕಾವ್ಯಕ್ಕೆ ಹೆಸರು ಕೊಟ್ಟು ಆ ವ್ಯಕ್ತಿ ಪಾತ್ರದ ಸುತ್ತಲೂ ಕಾವ್ಯ ಕಥನ ಕಟ್ಟಿ ಬೆಳೆಸುತ್ತಾರೆ. ಉದಾರಹಣೆಗೆ ಕಾಳಿಂಗರಾಯ ಕಾವ್ಯ, ಎಲ್ಲಮ್ಮನ ಕಥನ ಕಾವ್ಯ, ಮಲೆ ಮಹಾದೇಶ್ವರ ಕಾವ್ಯ ಇತ್ಯಾದಿಗಳು. ಈ ಜನಪದ ಕಾವ್ಯದ ಭಾಷೆ. ಶೈಲಿಯು ಸಾಮಾನ್ಯ ಜನಭಾಷೆ ಸರಳ ಶೈಲಿ, ಸಲುಲಭವಾಗಿ ಹಾಡುವ ಧಾಟಿಯ ಮೂಲಕ ಸಾಮಾನ್ಯ ಜನರ ಭಾಷೆಯಲ್ಲಿ ಕಾವ್ಯ ಕಟ್ಟುವಿಕೆ, ಅನುಕೂಲಕ್ಕೆ ತಕ್ಕಂತೆ ಯತಿ

ಬರುವಂತೆ, ಔಚಿತ್ಯಪೂರ್ಣವಾಗಿ ಕಾವ್ಯ ಬೆಳೆಸುತ್ತಾರೆ. ಈ ಕಾವ್ಯಗಳು ಸ್ತುತಿಯಿಂದ ಆರಂಭವಾಗಿ ಮಗು ಹುಟ್ಟಿ ಬೆಳೆದು, ವೃದ್ಧನಾಗಿ ಕೊನೆಗೆ ಮುಪ್ಪಿನಲ್ಲಿ ಸಾವಿನಿಂದ ವ್ಯಕ್ತಿ ಜೀವನ ಸಾಗಿಬರುವಂತೆಯೇ ಈ ಕಾವ್ಯ ಬೆಳೆಸಿ ಕೊನೆಯಲ್ಲಿ ಮಂಗಳ ಹಾಡಿ ಶುಭ ಕೋರಿ ಕಾವ್ಯಕ್ಕೆ ನಾಂದಿ ಹಾಡುತ್ತಾರೆ.

ಜನಪದ ಕಥನ ಕಾವ್ಯಗಳಲ್ಲಿ ಪ್ರಮುಖ ಪಾತ್ರಕ್ಕೆ ಪೋಷಕ ಪಾತ್ರಗಳು ಪ್ರಾದೇಶಿಕವಾಗಿ ವರ್ಣನೆ, ಪ್ರಾದೇಶಿಕ ಭಾಷೆಯ ಬಳಕೆ, ಪ್ರಾದೇಶಿಕ ವ್ಯಕ್ತಿ ನಾಯಕನಾಗಿ ಕಂಡು ಬರುತ್ತಾನೆ. ದೇಶೀಯತೆಯು ವ್ಯಕ್ತಿಯನ್ನು ಆವರಿಸಿದ್ದು ಬಂಧುತ್ವದ ಕಲ್ಪನೆಯಂತೆ ಜೀವನ ಶೈಲಿ ರೂಪಿತವಾಗಿರುವುದನ್ನು ಕಾಣಬಹುದಾಗಿದೆ. ಆದರ್ಶ ಜೀವನ ಪದ್ಧತಿ ಪ್ರಾದೇಶಿಕತೆಗೆ ಪ್ರಾತಿನಿಧ್ಯತೆ ನೀಡಲಾಗಿರುತ್ತದೆ. ಈ ಕಾವ್ಯ ಹಾಡಲು ಮೂರರಿಂದ ಆರರವರೆಗೆ ಗಾಯಕರು ಇರುತ್ತಾರೆ. ಸಾಮಾನ್ಯವಾಗಿ ಈ ಹಾಡುಗಳು ಲಘು ಲಯದೊಂದಿಗೆ ಪ್ರಾರಂಭವಾಗುತ್ತದೆ. ಪುನರಾವರ್ತನೆ ಸರ್ವೇ ಸಾಮಾನ್ಯವಾಗಿರುತ್ತದೆ. ಹಾಡಿನ ಪ್ರತಿಯೊಂದು ಕೊನೆಗೆ 'ತಂದಾನಾ' ಇಂತಹ ಶಬ್ಧಗಳು ಪುನಃ ಪುನಃ ಮರುಕಳಿಸಿ ಹಾಡುತ್ತಾರೆ. ಕಾವ್ಯದ ಮಧ್ಯೆ ಮಧ್ಯೆದಲ್ಲಿ ಏನಾತ್ರಿ, ಹೌದ್ರಿ, ಉಧೋ, ತಂದಾನಾ ಮೊದಲಾದ ಶಬ್ಧಗಳು ಪ್ರಶ್ನಾರ್ಥಕವಾಗಿ ಸಂಭೋದನೆಗೊಳ್ಳುತ್ತಿರುತ್ತದೆ. ಈ ಕಾವ್ಯಗಳನ್ನು ಬೆಳತನಕ ಹಾಡುತ್ತಾರೆ.

ಜನಪದ ಕಾವ್ಯಗಳು ವಿಶೇಷ ಹಬ್ಬ ಹರಿದಿನಗಳು ಅಮವಾಸ್ಯೆ, ಹುಣ್ಣಿಮೆ ಸಾಂಸ್ಕೃತಿಕ ದಿನಗಳಲ್ಲಿ ಹಾಡುತ್ತಾರೆ. ಜಾತ್ರೆ ಸಂದದರ್ಭದಲ್ಲಿ ಮುಕ್ತ ಕಂಠದಿಂದ ಹಾಡುವವರು. ಕೆಲವು ವಿಶೇಷ ಸಂದರ್ಭದಲ್ಲಿ ವೀಳ್ಯ ಕೊಟ್ಟು ಕರೆಸುತ್ತಾರೆ. ಕೆಲವರು ಸ್ವಯಂ ಪ್ರೇರಣೆಯಿಂದ ಹಾಡುತ್ತಾರೆ. ಈ ಕಾವ್ಯಗಳು ಜೀವನದ ಪ್ರತಿಬಿಂಬಿಸುವಂತೆ, ಕಲೆಯ ಪ್ರದರ್ಶನವಾಗಿ ಬದುಕಿನ ಅನ್ಯೋನ್ಯತೆಯಾಗಿ ನಿತ್ಯೋಪಯೋಗಿಯಾಗಿ ಪ್ರದರ್ಶನ ಕಾವ್ಯಗಳಾಗಿ ಮೂಡಿ ಬರುತ್ತವೆ. ಈ ಕಾವ್ಯಗಳು ಮೇಲು ನೋಟಕ್ಕೆ ರಂಜನೀಯವಾಗಿದ್ದರೂ ಸಹ ಗಂಭೀರವಾದ ಅಂಶಗಳನ್ನು ಚಿತ್ತರಿಸುತ್ತವೆ. ಹಾಡುಗಾರರು ಭಕ್ತಿ, ಭಾವ ನಯ, ನಾಜೂಕಾಗಿ, ಉದ್ದೀಪನಗೊಳಿಸುವರು. ಈ ಕಥನ ಕಾವ್ಯಗಳು ನೀತಿಪಾಠ, ಸ್ತುತಿ ಗೀತೆ, ಚರಿತ್ರೆ ಮತ್ತು ಮಹಿಮೆ ದೈವ ಸ್ಮರಣೆ ಮೊದಲಾದ ಅಂಶಗಳನ್ನು ಚಿತ್ತರಿಸುತ್ತವೆ. ಭಾವನೆಗಳ ಒತ್ತಡ ಅಥವಾ ತಿವ್ರತೆ ಹಾಗೂ ನೋವನ್ನು ಹಗುರಗೊಳಿಸುವಂತೆ ಕಾವ್ಯ ಸೃಷ್ಟಿಸಲಾಗುತ್ತದೆ. ಈ ಕಾವ್ಯಗಳು ಭಾವ ತೀವ್ರತೆಯ ಮೂಲಕ ಹಾಡುವ, ಕುಣಿಯುವ ಜನರ ಮನಸ್ಸಿಗೆ ಮುಟ್ಟುವಂತೆ ಹಾಡುವಂತವಾಗಿವೆ. ಜನಪದ ಕಾವ್ಯಗಳು ಜನರ ಭಾವನೆ, ಅನುಭವಗಳ ಮೂಲಕ ಸೃಷ್ಟಿಯಾಗಿ ಸಾಮಾನ್ಯರಿಗೆ ಮುಟ್ಟುವಂತೆ ರಚನೆಯಾಗಿರುತ್ತವೆ. ಈ ಮೇಲಿನ ಎಲ್ಲಾ ಸ್ವರೂಪಗಳನ್ನು ಎಲ್ಲಮ್ಮನ ಕಥನ ಕಾವ್ಯದಲ್ಲಿ ಕಂಡು ಬರುವುದನ್ನು ನೋಡಬಹುದಾಗಿದೆ.

### ೪.೨ ಆಚರಣಾ ಲೋಕ

ಮಾನವ ಸಮಾಜದ ಎಲ್ಲಾ ಕಾಲದಲ್ಲೂ ಎಲ್ಲಾ ದೇಶಗಳಲ್ಲೂ ದೇವರು ಧರ್ಮದ ಬಗ್ಗೆ ವಿಶೇಷ ನಂಬಿಕೆ, ಸಂಪ್ರದಾಯಗಳು ಕಂಡು ಬರುತ್ತವೆ. ದೇವರ ಇರುವಿಕೆಯ ಬಗ್ಗೆ ವ್ಯಾಖ್ಯಾನ ಜಿಜ್ಞಾಸೆ ಲೆಕ್ಕವಿಲ್ಲದಷ್ಟು ನಡೆದಿವೆ ಆದರೂ ದೇವರ ಬಗ್ಗೆ ನಂಬಿಕೆಗಳು ಮುಂದುವರೆದುಕೊಂಡು ಬಂದಿವೆ. ದೇವರ ಹೆಸರಿನಲ್ಲಿ ವಿಭಿನ್ನವಾದ ಆಚರಣೆಗಳು, ನಂಬಿಕೆಗಳ, ಸಂಪ್ರದಾಯಗಳು ಬೆಳೆದು ಬರುತ್ತದೆ. ಪ್ರಕೃತಿಯ ವಿಕೋಪ, ಅತಿಮಾನುಷ ಶಕ್ತಿಯ ಫಲವೆಂದು ನಂಬಿದ್ದ ಅದಕೆ ದೇವರ ಕಲ್ಪನೆ ನೀಡಲಾಗಿದೆ.

ಯಾವುದೋ ಅವ್ಯಕ್ತ ಶಕ್ತಿಯ ಪ್ರಭಾವದಿಂದ ಅತಿವೃಷ್ಟಿ, ಅನಾವೃಷ್ಟಿ, ಜಲಪ್ರಳಯ, ಭೂಕಂಪಗಳು ಮೊದಲಾದ ಘಟನಾವಳಿಗಳಿಗೆ ದೇವರೇ ಕಾರಣೀಕರ್ತನೆಂದು ನಂಬಿದ್ದಾರೆ. ಇಂತಹ ಘಟನೆಗಳು ನಿಯಂತ್ರಿಸಲಾಗದೆ ದೇವರ ಭಾವನೆಯಿಂದ ಪೂಜಿಸುತ್ತಾರೆ. ದೇವರು ಸರ್ವವ್ಯಾಪಿ ಸರ್ವಾಂತರ್ಯಾಮಿ, ಸರ್ವಶಕ್ತ ಎಂದು ವಾಸ್ತವಿಕ ಬದುಕು ನಂಬಿಕೆಯಿಂದ ಸಾಗುತ್ತದೆ. ದೇವರ ಪೂಜೆ ಲೋಕರೂಢಿಯಾಗಿದೆ. ಇಂದು ಪ್ರಪಂಚ ಇಷ್ಟೆಲ್ಲಾ ಮುಂದುವರೆದಿದ್ದರೂ ಸಹ ವೈಜ್ಞಾನಿಕ ಪ್ರಪಂಚವೂ ಸಹ ದೇವರ ಹೆಸರಿನಲ್ಲಿ ಪೂಜೆ ಮಾಡುತ್ತಿರುವುದನ್ನು ನೋಡಬಹುದಾಗಿದೆ. ಮಾನವ ಪ್ರಕೃತಿಯನ್ನು ಆಶ್ರಯಿಸಿ ಜೀವಿಸುತ್ತಿದ್ದು, ಪ್ರಕೃತಿಯ ಪ್ರತಿಯೊಂದು ವಸ್ತುಗಳಿಗೆ ದೇವರ ಸ್ಥಾನ ಕಲ್ಪಿಸಿಕೊಂಡಿದ್ದಾನೆ.

ಎಲ್ಲಾ ಜಾತಿ, ಧರ್ಮದ ಜನರನ್ನು ದೇವರು ಜಾತಿ ಧರ್ಮಗಳ ನಿಯಂತ್ರಿತ ಶಕ್ತಿಗೆ ಒಳಪಟ್ಟಿರುತ್ತಾರೆ. ಈ ನಿಯಂತ್ರಿತ ಶಕ್ತಿಗೊಳಪಟ್ಟು ಜೀವಿಸುತ್ತಾರೆ. ಆಯಾ ಜಾತಿ, ಧರ್ಮದ ಹೆಸರಿನಲ್ಲಿ ಮಾನವೀಯತೆಯ ಅಂಶಗಳು ತತ್ವಗಳು ಅಡಕವಾಗಿವೆ. ದೇವರ ಹೆಸರಿನಿಂದ ಸಮಾಜದ ಸ್ತರ ವ್ಯವಸ್ಥೆ ಸಹ ಸೃಷ್ಟಿಯಾಗಿದ್ದು, ಮೇಲು ಕೀಳು, ಸ್ಪೃಶ್ಯ ಅಸ್ಪೃಶ್ಯ ಆಚರಣೆಗಳು ಶತಮಾನಗಳಿಂದ ಉರುಳಿಕೊಂಡು ಬಂದಿವೆ. “ದೇವರು ಧರ್ಮದ ಹೆಸರುಗಳಲ್ಲಿ ಸ್ತ್ರೀ–ಪುರುಷರ ವಿಭಿನ್ನ ಪಾತ್ರಗಳು ಹಾಗೂ ಧಾರ್ಮಿಕವಾಗಿ ಸ್ತ್ರೀ ಏನೇನು ಯೋಗ್ಯತೆಯಿಲ್ಲದವಳು, ಏನನ್ನು ಸಾಧಿಸಲಾರಳು ಎನ್ನುವ ನಂಬಿಕೆಯೂ ಹೆಚ್ಚು ಕಡಿಮೆ ಪ್ರಪಂಚದ ಎಲ್ಲಾ ಧರ್ಮಗಳಲ್ಲಿ ಬೇರೂರಿದೆ”[೪] ಪುರುಷ ಸಮಾಜ ವ್ಯವಸ್ಥೆ ಸಹ ದೇವರ ಹೆಸರಿನಲ್ಲೇ ಕಂಡು ಬುರುತ್ತದೆ.

ದೇವರ ವಿಚಾರದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರ ಈ ಮುರು ಪುರುಷ ದೇವರು ಪ್ರಾಮುಖ್ಯತೆ ಪಡೆದಂತೆಯೇ ಇವರುಗಳಿಗೆ ಪತ್ನಿಯಾದ ಸರಸ್ವತಿ, ಲಕ್ಷ್ಮಿ ಪಾರ್ವತಿಯರು ಶಕ್ತಿ ಸ್ವರೂಪಿಣಿಯರಾಗಿದ್ದು ಕಂಡು ಬರುತ್ತದೆ. ಪಾರ್ವತಿಯ ಪ್ರತಿರೂಪವಾಗಿ ಈ ಎಲ್ಲಮ್ಮ ಕಂಡು ಬರುತ್ತಾಳೆ. ಎಲ್ಲಮ್ಮನ ಆರಾಧನೆ ಒಂದು ಊರು, ಒಂದು ಸೀಮೆಗೆ ದೇವತೆಯಾಗಿದ್ದು ಕಾಲ ಕ್ರಮದಲ್ಲಿ ದಕ್ಷಿಣ ಭಾರತದ ನಾಲ್ಕಾರು ಪ್ರಾಂತ್ಯಗಳಿಗೆ ವಿಸ್ತರಿಸಿದೆ.

ಎಲ್ಲಮ್ಮನ ಶಕ್ತಿಯ ವ್ಯಾಪ್ತಿಯಲ್ಲಿ ವಿಸ್ತೃತವಾಗಿದ್ದು ಕರ್ನಾಟಕ, ಗೋವೆ, ಮಹಾರಾಷ್ಟ್ರ ಇನ್ನಿತರೆ ಕಡೆ ಈ ದೇವಿಯ ಭಕ್ತರು ಹರಡಿದ್ದಾರೆ. ಹುಣ್ಣಿಮೆ ಜಾತ್ರೆಗಳಲ್ಲಿ ಸವದತ್ತಿಗೆ ಜನಜಂಗುಳಿ ಬರುತ್ತದೆ. ಬರುವ ಯಾತ್ರಿಕರಲ್ಲಿ ಹಿಂದೂಗಳಲ್ಲದೇ ಭಿನ್ನ ಧರ್ಮವಲಂಬಿಗಳೂ ಮತ್ತು ಗಿರಿಜನರು, ಗಂಡಸರು, ಹೆಂಗಸರು, ಮಕ್ಕಳು ಎಲ್ಲರೂ ಇದ್ದಾರೆ. ಆದರೆ ಮುಖ್ಯವಾಗಿ ಎಲ್ಲಮ್ಮ ಆಕರ್ಷಿಸುವುದು ಕೆಳಜಾತಿ ವರ್ಗದವರನ್ನೇ ಎಂದರೆ ತಪ್ಪಾಗಲಾರದು. ಏಕೆಂದರೆ ಕೆಳವರ್ಗದ ಜನರು ತಮ್ಮ ಮನೆದೇವಿಯಾಗಿ ಆಚರಿಸುತ್ತಿದ್ದಾರೆ. ಇದಕ್ಕೆ ಶೂದ್ರರೇ ಅತಿ ಹೆಚ್ಚು ಬಭಕ್ತರಿದ್ದಾರೆ. ಇವರೇ ಭಕ್ತರು, ಇವರೇ ಆರಾಧಕರಾಗಿ ಕಂಡುಬರುತ್ತಾರೆ. ಎಲ್ಲಮ್ಮನ ಭಕ್ತರು 'ಆತ್ಮಾರ್ಪಣೆ' ಮಾಡಿಕೊಂಡು ದೀಕ್ಷೆ ಪಡೆದಿರುತ್ತಾರೆ.

ದೀಕ್ಷೆ ಪಡೆದ ಭಕ್ತರು ಜೋಗಪ್ಪ, ಜೋಗವ್ವ ಜೋಗತಿ ಆಗಿಬಿಡುತ್ತಾರೆ. 'ಮುತ್ತು' ಕಟ್ಟಿಸಿಕೊಂಡು ಕೆಳಜಾತಿ ಹೆಣ್ಣು ಮಕ್ಕಳ ತಮ್ಮ ಸ್ಥಿತಿಗತಿ ಮೇಲು ವರ್ಗದವರ ಕಪಿಮುಷ್ಟಿಯಲ್ಲಿ ಇರುವಂತದ್ದಾಗಿದೆ. “ಉಚ್ಚ ಜಾತಿಯ ಮದುವೆಯಾದ ಹೆಣ್ಣು ಮಕ್ಕಳು 'ಗರತಿ ಮುತ್ತು' ಕಟ್ಟಿಸಿಕೊಂಡು ಹಬ್ಬ, ಹುಣ್ಣಿಮೆಗಳಲ್ಲಿ

ದೇವತೆ ಸೇವೆಗಷ್ಟೇ ಸೀಮಿತಗೊಳಿಸಿ ಮರ್ಯಾದೆಯುತ ಜೀವನ ನಡೆಸುತ್ತಾರೆ. ಆದರೆ ಕೆಳಜಾತಿಯ ಹೆಣ್ಣುಗಳು 'ದೇವದಾಸಿ'ಯಾಗಿ ವೇಶ್ಯಾ ಜೀವನಕ್ಕೆ ಇಳಿಯುತ್ತಾರೆ"[೫] ದೇವರಿಗೆ ಬಿಟ್ಟ ಈ ಹೆಣ್ಣು ಮಕ್ಕಳು ಈ ಜನ್ಮದಲ್ಲಿ ಯಾವ ಗಂಡಸಿನೊಡನೆ ಮದುವೆ ಮಾಡಿಕೊಳ್ಳುವಂತಿಲ್ಲ. ಏಕೆಂದರೆ ಅವರು ಎಲ್ಲಮ್ಮನಿಗೆ ಅರ್ಪಿತರಾದ ಎಲ್ಲಮ್ಮನ 'ಸತಿ'ಯರು. ಹೆಣ್ಣು ದೇವತೆ. ತನ್ನ ಸ್ತ್ರೀ ಕುಲದವರನ್ನೇ ಬಲಿ ತೆಗೆದುಕೊಳ್ಳುವುದಕ್ಕೆ ಇದೊಂದು ಉತ್ತಮ ನಿದರ್ಶನ. ಹೀಗೆ ತಾತ್ವಿಕತೆಯಿಂದ ಮೊದಲಾದ ಪರಂಪರೆ, ಮುತ್ತು ಕಟ್ಟಿದ ಹೆಣ್ಣು ಮಕ್ಕಳು ವಯಸ್ಸಿಗೆ ಬರುತ್ತಿದ್ದಂತೆ 'ಸಾರ್ವಜನಿಕ' ಸ್ವತ್ತು, ಯಾವ ಗಂಡಸಾದರೂ ಅವರನ್ನು 'ಹೆಣ್ಣು' ಮಾಡಬಹುದು. ಅಂದರೆ ಈ ವ್ಯವಸ್ಥೆಯಲ್ಲೂ ಜಾತಿ-ವರ್ಗದ ಪ್ರಾಮುಖ್ಯತೆ ಕಂಡು ಬರುತ್ತದೆ. 'ಸೂಳೆ'ಯಾದವಳು, ತನ್ನ ಪ್ರಿಯಕರನನ್ನು ಅವಳ ಜಾತಿ, ತತ್ಸಮಾನವಾದ ಜಾತಿ ಅಥವಾ ಉತ್ತಮ ಜಾತಿಯಿಂದ ಆರಿಸಿಕೊಳ್ಳಬೇಕೆ ವಿನಃ ಅವಳಿಗಿಂ ಕೆಳಜಾತಿಯವರನ್ನು ಕೂಡಬಾರದು, ಹಾಗೆ ಮಾಡಿದರೆ ಅವಳು 'ಜಾತಿ'ಗೆಟ್ಟವಳಾಗುತ್ತಾಳೆ ಎಂಬ ಕಲ್ಪನೆ ಇದೆ.

ಉಚ್ಚಜಾತಿ, ನೀಚಜಾತಿ ಎಂಬ ನಡತೆ ವ್ಯವಹಾರದಲ್ಲಿ ಕೆಳಜಾತಿಯವರನ್ನು ಇನ್ನೂ ಕೆಳಕ್ಕೆ ತಳ್ಳುವ ಕಾರ್ಯ ನಡೆಯುತ್ತದೆ. ಇವರನ್ನು ಕೇವಲ ಭೋಗದ ವಸ್ತುವಾಗಿ ನೋಡಲಾಗುತ್ತದೆ. ದೇವರು-ಧರ್ಮದ ಹೆಸರಿನಲ್ಲಿ ಪುರೋಹಿತಶಾಹಿಗಳು ರಚಿಸಿದ ಒಂದು ದೊಡ್ಡ ಜಾಲವಾಗಿದೆ ಎಂದೇ ಹೇಳಬೇಕಾಗುತ್ತದೆ. ಹುಟ್ಟಿನ ಹಿನ್ನೆಲೆಯಿಂದ ದೌರ್ಜನ್ಯ, ದಬ್ಬಾಳಿಕೆ ನಡೆಯುತ್ತದೆ. ಹೆಣ್ಣು ಮಕ್ಕಳು ಎಲ್ಲಮ್ಮನ ಅನುಯಾಯಿಗಳಾಗಿ ದೇವದಾಸಿಯಾಗಿ ಇದು ಒಂದು ಅಸಹ್ಯ ಪದ್ಧತಿ, ಕಳಂಕವೆಂದೇ ಭಾವಿಸಬಹುದು. ದೇವದಾಸಿ ಪದ್ಧತಿಯು ಪ್ರಾಚೀನ ಕಾಲದಿಂದಲೂ ರಾಜ ಮಹಾರಾಜರು, ಜಮೀನ್ದಾರರು, ಪಾಳೆಗಾರರು ಮೊದಲಾದವರು ದೇವರ ಹೆಸರಿನಲ್ಲಿ ಕೆಳಜಾತಿಯ ಸ್ತ್ರೀಯರ ಮೇಲೆ ನಡೆಸುತ್ತಿರುವ ದೌರ್ಜನ್ಯವಾಗಿದೆ. ಇದು ಜನ್ಮ ಜನ್ಮಾಂತರದ ಅನುಸರಣೆಯ ಪದ್ಧತಿಯಾಗಿ ಬೆಳೆದು ಬಂದಿದೆ. ಹೆಣ್ಣು ಮಕ್ಕಳನ್ನು ಗಂಡು, ಹೆಣ್ಣು ದೇವತೆಗಳಿಬ್ಬರಿಗೂ ಬಿಡುವುದು ವಾಡಿಕೆಯಾಗಿದೆ. ಇದರ ವ್ಯಾಪ್ತಿ ಹೆಚ್ಚಿದ್ದು, ದೇವರಿಗೆ ಬಿಡುವ ಹೆಣ್ಣು ಮಕ್ಕಳಿಗೆ ಅನೇಕ ಕಾರಣಗಳನ್ನು ಕೊಡಬಹುದಾಗಿದೆ.

ಆಥಿಕ ಸ್ಥಿತಿಯು ಅಷ್ಟೊಂದು ಉತ್ತಮವಾಗಿಲ್ಲದ ಕಾರಣ ಹೆಣ್ಣು ಮಕ್ಕಳ ದೇವರಿಗೆ ಬಿಡುವರು ಎಂಬ ಕಲ್ಪನೆ ಅಷ್ಟೊಂದು ಸಮಂಜಸವಾಗಿಲ್ಲ. ಇದಕ್ಕೆ ಮಿಗಿಲಾಗಿ ಅನೇಕ ಕಾರಣಗಳಿವೆ. ಅವುಗಳು ಈ ಕೆಳಗಿನಂತೆ ಕೊಡಬಹುದಾಗಿದೆ.

* ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಮದುವೆಯಾಗಿ ಗಂಡನ ಮನೆಗೆ ಹೋಗಿ ಜೀವಿಸಬೇಕು. ಅಂತಹ ಸಂದರ್ಭದಲ್ಲಿ ಅಲ್ಲಿನ ಅತ್ತಿಗೆ, ನಾದಿನಿ, ಅತ್ತೆ ಮಾವಮದಿರು ಕೊಡುವ ಹಿಂಸೆಯನ್ನು ಪಡೆಯಲಾರದೆ ದೇವರಿಗೆ ಬಿಡುವ ಕಲ್ಪನೆ ಜಾರಿಗೆ ಬಂದಿರಲು ಸಾಧ್ಯವಿದೆ.

* ಏಕಪುತ್ರಿಯಾದರೆ ಅಥವಾ ಬೇರೆ ಮಕ್ಕಳಿಲ್ಲದೆ ಪುತ್ರಿ ವಾತ್ಸಲ್ಯದಿಂದಾಗಿ, ಮುಪ್ಪಿನಲ್ಲಿ ನಮಗೆ ಆಶ್ರಯಬೇಕೆಂಬುದರ ಹಿನ್ನಲೆಯಲ್ಲಿ ಮಗಳನ್ನು ದೇವರಿಗೆ ಬಿಟ್ಟು ಮನೆಯಲ್ಲಿರಿಸಿಕೊಂಡು ವಂಶ ಉದ್ಧಾರಕ್ಕೆ ಆ ಮುಲಕ ಪ್ರಯತ್ನಪಡಬಹುದು.

* ಹುಟ್ಟಿದ ಮಕ್ಕಳೆಲ್ಲಾ ಸತ್ತರೆ ಅಥವಾ ರೋಗ ರುಜಿನಗಳಿಗೆ ತುತ್ತಾದರೆ ಹಿರಿಯರು ಅಂತಹ ಮಕ್ಕಳನ್ನು ದೇವರ ಹೆಸರಿನಲ್ಲಿ 'ಹರಕೆ' ಹೊತ್ತು, ವಿಪತ್ತಿನಿಂದ ಪಾರಾದ ಆ ಮಕ್ಕಳನ್ನು ದೇವರಿಗೆ ಅರ್ಪಿಸುವುದೂ ವಾಡಿಕೆಯಾಗಿದೆ. ಇಂತಹ ಇನ್ನೂ ಹಲವಾರು ಕೌಟುಂಬಿಕ, ಸಾಮಾಜಿಕ ಕಾರಣಗಳು ಈ ಪದ್ಧತಿಯ ಹಿಂದೆ ಅಡಕವಾಗಿವೆ.

ದೇವರಿಗೆ ಬಿಟ್ಟ ಹೆಣ್ಣು ಮಕ್ಕಳ ಕೌಟುಂಬಿಕ ಹಾಗೂ ಸಾಮಾಜಿಕ ಸ್ಥಾನಮಾನದಲ್ಲಿ ಅವಮಾನಕರ ಎಂದು ಯೋಚಿಸುವುದಕ್ಕೆ ಎಡೆಯಿಲ್ಲ. 'ಸೂಳೆ ಬಿಟ್ಟ' ಮಕ್ಕಳ ಸ್ಥಾನ ತಂದೆ ಮನೆಯಲ್ಲಿ ಮಗನಿಗೆ ಸರಿಸಮಾನವಾದುದಾಗಿದೆ. ಆಕೆಯ ಮಕ್ಕಳು ತಂದೆಯ ವಂಶವನ್ನೇ ಮುಂದುವರೆಸುತ್ತಾರೆ. ದೇವದಾಸಿಯ ಮಕ್ಕಳು ಆಕೆಯ ಸಹೋದರರ ಮಕ್ಕಳಂತೆ ತಮ್ಮ ಸ್ಥಾನ ಕಾಪಾಡಿಕೊಂಡು ಅಣ್ಣ–ತಮ್ಮ, ಅಕ್ಕ–ತಂಗಿ ಸಂಬಂಧವನ್ನೇ ಮುಂದುವರೆಸುತ್ತಾರೆ.

ಏಳುಕೊಳ್ಳದ ಎಲ್ಲಮ್ಮನ ಸುತ್ತಲೂ ಹೆಣೆದುಕೊಂಡಿರುವ ವಿಶಿಷ್ಟ ಪದ್ಧತಿ ಪರಂಪರೆಗಳಲ್ಲಿ ಕೆಂಪು ಮುತ್ತು ಕಟ್ಟಿ ಪ್ರತಿ ವರ್ಷ ಸಾವಿರಾರು ಹೆಣ್ಣು ಮಕ್ಕಳನ್ನು ಉತ್ತರ ಕರ್ನಾಟಕದಿಂದ ಮಹಾರಾಷ್ಟ್ರದ ದೊಡ್ಡ ದೊಡ್ಡ ಪಟ್ಟಣಗಳಿಗೆ, ಮಧ್ಯ ಪ್ರಾಚ್ಯ ದೇಶಗಳಿಗೆ ವೇಶ್ಯ ವೃತ್ತಿಗೆ ನೂಕುತ್ತಿದ್ದರು. ಇದು ನಾಗರೀಕ ಸಮಾಜದವು ತಲೆ ತಗ್ಗಿಸುವ ಕೆಲಸವೆಂದೇ ಹೇಳಬಹುದಾಗಿದೆ. ಇದು ದೇವರ ಧರ್ಮದ ಹೆಸರುಗಳಲ್ಲಿ ನಡೆಯುವ ಅಮಾನುಷ ಸಂಗತಿಯಾಗಿದೆ. ಗ್ರಾಮ ದೇವತೆಯ ಹೆಸರುಗಳಲ್ಲಿ ಮಾರಿ, ಮಸಣಿ, ಚಂಡಿ, ಚಾಮುಂಡಿ, ದುರ್ಗಿ, ಕರಿಯಮ್ಮ, ಎಲ್ಲಮ್ಮ, ಕಾಳಿ ಹೀಗೆ ಹಲವು ಹೆಸರು ತಮಗೆ ತಗಲುವ ಕಾಲರಾ, ಪ್ಲೇಗು, ಸಿಡುಬು, ಮೊದಲಾದ ರೋಗಗಳ ನಿವಾರಣೆಗೆಂದು ಬಳಸುವ ಆಚರಿಸುವ ದೇವಾರಾಧನೆ ಕಂಡು ಬರುತ್ತದೆ.

ಎಲ್ಲಮ್ಮನ ಆಚರಣೆಯನ್ನೇ ಹೋಲುವ ಉಚ್ಚಂಗಿ ದುರ್ಗದ ಉಚ್ಚೆಂಗೆಮ್ಮ, ಉಚ್ಚಂಗಿ ಕೆಂಚಮ್ಮ ಈ ಹೆಣ್ಣು ದೇವತೆಗಳು ದೇವರ ಹೆಸರಿನಲ್ಲಿ ಹೆಣ್ಣು ಮಕ್ಕಳಿಗೆ ಮುತ್ತು ಕಟ್ಟುವುದು, ದೇವರ ಹೆಸರಿನಲ್ಲಿ ಹರಕೆ, ಪೂಜೆ, ಜಾತ್ರೆ, ಉತ್ಸವ ನಡೆಯುತ್ತದೆ. ಬಳ್ಳಾರಿ, ದಾವಣಗೇರೆ ಸಮೀಪದ ಉಚ್ಚಂಗಿ ಗುಡ್ಡ ಕಿರಿದಾಗಿದ್ದು ಕೋಟೆಯಿಂದ ಆವೃತವಾಗಿದೆ. ಇಲ್ಲೂ ಮುತ್ತು ಕಟ್ಟುವ ಅಮಾನುಷ ಪದ್ಧತಿಗೆ ನಿರ್ಬಂಧ ಹೇರಲಾಗಿದೆ. ದೇವದಾಸಿ ಪದ್ಧತಿಯು ಈ ಮೂಲಕ ನಡೆಸಲಾಗುತ್ತದೆ. ಇಲ್ಲಿ "ಭಂಡಾರ' ಹಚ್ಚುವುದು ನಿತ್ಯ ಸುಮಂಗಳೆಯರಾಗಿ ಬಾಳುವ ಇವರು ದೇವರ ದಾಸಿಗಳಾಗಿ ದೇವರ ಸೇವೆ ಮಾಡುವರು ಎಂಬ ವಾಡಿಕೆ ಇದೆ. ದೇವರ ಹೆಸರಿನಲ್ಲಿ ಬೇನಸೀರೆ, ಮೇಕೆ, ಕುರಿ, ಕೋಳಿಗಳ ಬಲಿ ಕೊಡುವಿಕೆ, ಸಾಮೂಹಿಕ ಊಟ ಮಾಡುವುದು. ಸ್ನೇಹಿತರ ಕೂಟಗಳು 'ಜೋಗವ್ವನ ಪಡಲಿಗೆ' ಹಾಕುವುದು. ಉಧೋ ಎಂದು ಭಂಡಾರ ಹಾಕಿ ದೇವರ ಒಕ್ಕಲು ಮಾಡಿಕೊಂಡು ಈ ಎಲ್ಲಾ ಸಂಪ್ರದಾಯ ಮಾಡುತ್ತಾರೆ.

ಮೇ ತಿಂಗಳಲ್ಲಿ ಬರುವ 'ಅಗೆ ಹುಣ್ಣಿಮೆ' ಹಾಗೂ ಡಿಸೆಂಬರ್‌ನಲ್ಲಿ ನಡೆಯುವ 'ಬನದ ಹುಣ್ಣಿಮೆ' ಹೊರಗಿನಿಂದ ಸಾಕಷ್ಟು ಜನರನ್ನು ಯಾತ್ರಾರ್ಥಿಗಳನ್ನು ಆಕರ್ಷಿಸುತ್ತದೆ. ಒಟ್ಟಾರೆ ಹುಣ್ಣಿಮೆ ದೇವರ ಕಾರ್ಯಕ್ಕೆ ಯೋಗ್ಯವಾದುದು ಎಂಬ ಕಲ್ಪನೆಯಿದ್ದು, ಭಕ್ತರು ಈ ದಿನಗಳಲ್ಲಿ ಉತ್ಸವ, ಶುಭ ಕಾರ್ಯಗಳನ್ನು

ಕೈಗೊಳ್ಳುತ್ತಾರೆ.

ಎಲ್ಲಮ್ಮ ದೇವಿಯ ಭಕ್ತರು ದೇವಿಯ ನಾಮ ಸ್ಮರಣೆಯಲ್ಲಿ ಉಧೋ ಎಂದು ಉಧೋ ಹಾಕುತ್ತಾ ಗಂಡು ಹೆಣ್ಣಿನ ವೇಶ ಧರಿಸಿ ಜೋಗವ್ವಗಳಾಗಿರುತ್ತಾರೆ. ಅದೇ ರೀತಿ ಹೆಣ್ಣು ಗಂಡಸಿನ ವೇಶ ಧರಿಸಿ ಜೋಗಪ್ಪ ಎಂದು ಕರೆಸಿಕೊಳ್ಳುತ್ತಾರೆ. ಜೋಗಪ್ಪ ಜೊಗವ್ವ ಕಲ್ಪನೆಯು ರೇಣುಕಾ ಅಥವಾ ಏಕವಿರಾ ಎಂಬ ಪೌರಾಣಿಕ ಸ್ತ್ರೀಯ ಕತೆಯ ಮೇಲೆ ಬೆಳೆದಿದೆ. ಸವದತ್ತಿ ಸುತ್ತ ಮುತ್ತಣ ಜೋಗಪ್ಪ ಜೋಗವ್ವ ಜೋಗತಿಯರ ಜನಪದ ಹಾಡುಗಳ ಪುರಾಣ ಸಾದೃಶ್ಯ ಕಥೆ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಹರಡಿವೆ. ಇವರು ಚೌಡಿಕೆ ಮೇಳದಲ್ಲಿ ಚೌಡಿಕೆ ಬಾರಿಸಿ ದೇವಿಯ ಕಥನ ಕಾವ್ಯ ಹಾಡುತ್ತಾರೆ.

"ಶ್ರೀ ರೇಣುಕಾ ಎಲ್ಲಮ್ಮನ ಭಕ್ತರು ಪರಂಪರಾನುಗತವಾಗಿ ಸಾಂಕೇತಿಕವಾಗಿ ಕವಡೆ ಸರವನ್ನು ಧರಿಸಿ, ಬುಟ್ಟಿಯಲ್ಲಿ ದೇವಿಯನ್ನು ಹೊತ್ತುಕೊಂಡು ಚೌಡಿಕೆಯನ್ನು ಬಾರಿಸುತ್ತ "ಏಕಯ್ಯ ಜೋಗಯ್ಯ ಉಘೇ ಉಘೇ" ಎಂದು ಸ್ಮರಿಸುತ್ತಾ ಭಿಕ್ಷೆ ಬೇಡಿ ಪರಿಕರಗಳಲ್ಲಿ ಅರ್ಧವನ್ನು ದೇವಿಗೆ ಅರ್ಪಿಸಿ ಪೂಜಿಸುವ ಬೃಹತ್ ಭಕ್ತವೃಂದವೂ ಈಗಲೂ ಕ್ರಿಯಾಶೀಲವಾಗಿದೆ" [೬] ಸವದತ್ತಿ ಗದಗ ಪ್ರದೇಶಗಳಲ್ಲಿ ಹೆಚ್ಚಿನ ಭಕ್ತರು ಕಂಡು ಬರುತ್ತಾರೆ. ಇವರು ಜನವರ್ಗದ ಮೂಲ ಪುರುಷರಾಗಿ ಕಂಡು ಬರುತ್ತಾರೆ.

ಸವದತ್ತಿ ಎಲ್ಲಮ್ಮ ಭಕ್ತರು ಅಥವಾ ಆರಾಧಕರು ದಿನನಿತ್ಯದ ದೇವಿಯ ಬಗೆಗೆ ಧ್ಯಾನ, ಪೂಜೆ, ಕಾರ್ಯವೈಖರಿಗಳು ಈ ರೀತಿಯ ಸೇವೆಗಳ ಮೂಲಕ ನೆರವೇರಿಸುತ್ತಾರೆ.

* ದೇವಿಗೆ ಪ್ರತಿ ದಿನ ಪೂಜೆಗೆ ಉಡುಗೆ ಉಡಿಸುವಿಕೆ ಕಾರ್ಯಕ್ರಮಗಳನ್ನು ಮಾಡುತ್ತಾರೆ.

* ಎಲ್ಲಮ್ಮ ದೇವಿಯ ಪಲ್ಲಕ್ಕಿ ಉತ್ಸವ, ಸೇವೆ ಮಾಡುತ್ತಾರೆ.

* ಎಲ್ಲಮ್ಮಗೆ ಹರಕೆ ಕಟ್ಟಿಕೊಂಡು ತಮ್ಮ ಕಷ್ಟಗಳು ನಿವಾರಣೆಯಾದ ನಂತರ, ಜಾತ್ರೆ ಮಹೋತ್ಸವಗಳಲ್ಲಿ ಹರಕೆಯಂತೆ ಬೆತ್ತಲೆ ಸೇವೆ ಮಾಡುತ್ತಾರೆ.

* ಜಾತ್ರೆ, ಉತ್ಸವ, ಕುರುಹು ಕೇಳುವಾಗ ದೇವಿಗೆ ಮಾತನಾಡಿಸುವ ಪದ್ಧತಿ ಜಾರಿಯಲ್ಲಿದೆ. ಅದರಂತೆ ದೇವಿಗೆ ಮಾತನಾಡಿಸುತ್ತಾ ತಮ್ಮ ಕಷ್ಟಗಳ ಹೇಳಿಕೊಳ್ಳುತ್ತಾರೆ.

* ಭಕ್ತ ಬೆಳೆದ ಬೆಳೆ, ತಯಾರಿಸಿದ ಆಹಾರ ಪದಾರ್ಥಗಳು ದೇವಿಗೆ ನೈವೇಧ್ಯ ಮಾಡುತ್ತಾರೆ. ನಂತರ ಭಕ್ತರು ಬಳಸಿಕೊಳ್ಳುತ್ತಾರೆ.

* ದೇವಿಯ ಹೆಸರಿನಲ್ಲಿ ಜಗಮುಟ್ಯಾಗ ಆಹಾರ ಪದಾರ್ಥ ತೆಗೆದುಕೊಂಡು ಹೋಗಿ ದೇವಿಗೆ ಎಡೆ ಮಾಡಿ ಹರಕೆ ತೀರಿಸುತ್ತಾರೆ.

* ದೇವಿಯ ಹೆಸರಿನಲ್ಲಿ ಶುಭ ಕಾರ್ಯಗಳು ನಡೆಯುವ ನೆಪದಲ್ಲಿ ಕಂಕಣ ಕಟ್ಟುತ್ತಾರೆ.

* ದೇವಿಯ ಭಕ್ತರು ಜಾತ್ರೆ, ಉತ್ಸವ, ವಿಶೇಷ ದಿನಗಳಲ್ಲಿ ಭಕ್ತಾದಿಗಳಿಗೆ ಪ್ರಸಾದ ಸೇವೆಯ ಹೆಸರಿನಲ್ಲಿ ದಾಸೋಹ ನೀಡುತ್ತಾರೆ.

* ದೇವಿಯ ಭಕ್ತರು 'Homo Sexual' ಸಮ ಲಿಂಗಿಗಳಾಗಿದ್ದು ದೇವಿಯ ಸೇವೆಯಲ್ಲಿ ತಮ್ಮ ಜೀವನ ಸಾಗಿಸುತ್ತಾರೆ. ಮೊದಲಾದ ಅನೇಕ ರೀತಿಯ ವಿಶಿಷ್ಟ ಆಚರಣೆಯ ಅಂಶಗಳು ಕಂಡು ಬರುತ್ತವೆ. ದೇವಿಯ ಭಕ್ತರು ಸದಾ ಬಂಡಾರ ಚಿಲ ಕೊರಳಿಗಿಟ್ಟಿರುತ್ತಾರೆ. ಚೌಡಿಕೆ ವಾದ್ಯ ನುಡಿಸುತ್ತಾರೆ. ಚೌಡಿಕೆ ನಾದಕ್ಕೆ ದೇವಿಯ ಚರಿತ್ರೆ ನಾದಮಯವಾಗಿ ಕಾವ್ಯಗಳ ಮೂಲಕ ಹಾಡುತ್ತಾ ಮನೆ ಮನೆಗೆ ಹೋಗಿ ಶುಭ ಹಾರೈಸುತ್ತಾ ಜೀವನ ನಡೆಸುತ್ತಾರೆ.

**ಅಡಿ ಟಿಪ್ಪಣಿಗಳು**

೧. ಪರಮಶಿವಯ್ಯ ಜೀ.ಶಂ, ***ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು,*** ಪುಟ ಸಂಖ್ಯೆ – ೪೨

೨. ನಾಯಕ್ ಎನ್.ಆರ್, ***ನಾಡವರ ಜಾನಪದ ತವನಿಧಿ,*** ಪುಟ ಸಂಖ್ಯೆ – iii

೩. ಮೈಲಹಳ್ಳಿ ರೇವಣ್ಣ, ***ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು,*** ಪುಟ ಸಂಖ್ಯೆ – ೧

೪. ಕಲಬುರ್ಗಿ ಎಂ.ಎಂ, ***ಜಾನಪದ ಸಾಹಿತ್ಯ ದರ್ಶನ,*** ಪುಟ ಸಂಖ್ಯೆ – ೫

೫. ಅದೇ ಪುಟ ಸಂಖ್ಯೆ – ೮

೬. ಅದೇ ಪುಟ ಸಂಖ್ಯೆ – ೨೮

# ಅಧ್ಯಾಯ : ಐದು
# ಸಮಾರೋಪ

ಮಾನವ ತನ್ನ ಶಕ್ತಿಗೆ ಮೀರಿದ ಇನ್ನೊಂದು ಯಾವುದೋ ಅಮಾನುಷವಾದ ಶಕ್ತಿಯಿದೆಯೆಂದು ನಂಬಿದ್ದಾನೆ. ಆ ಶಕ್ತಿಯು ಪ್ರಕೃತಿಯಲ್ಲಿ ಕಂಡು ಬರುತ್ತದೆ. ಪ್ರಕೃತಿಯ ವಿಕೋಪಗಳು, ಗುಡುಗು, ಸಿಡಿಲು, ಅತಿವೃಷ್ಟಿ, ಅನಾವೃಷ್ಟಿ ಮೊದಲಾದ ಅನೇಕ ಘಟನಾವಳಿಗಳಿಗೆ ಬೇರೆಯದೇ ಆದ ಶಕ್ತಿಯಿದೆ, ಆ ಶಕ್ತಿಯ ಫಲವೇ ಈ ತರಹದ ಘಟನಾವಳಿಗಳಿಗೆ ಕಾರಣವಾಗಿದೆ. ಅದಕ್ಕೂ ಮುಗಿಲಾಗಿ ಮಾನವ ಒಳ್ಳೆಯ ತತ್ವ ಚಿಂತನೆಯುಳ್ಳ, ಮಾನವಿಕ ಅಂಶಗಳ ಒಳಗೊಂಡು, ನುಡಿದಂತೆ ನಡೆವ, ನಡೆದಂತೆ ನುಡಿವಂತಹ ವ್ಯಕ್ತಿಗಳನ್ನು ದೈವೀಕರಿಸುವುದು ಸಹಜವೆ ಆಗಿದೆ.

ಮಾನವಿಯತೆಯ ಪರಾಕಾಷ್ಟೆಯನ್ನು ಮರೆವ ವ್ಯಕ್ತಿಗಳಿಗೆ ದೈವಿ ಸ್ವರೂಪ ನೀಡುವುದು ಆ ವ್ಯಕ್ತಿ ಕುರಿತು ನುಡಿಯುವುದು, ಕಾವ್ಯ ಕಟ್ಟುವುದು ಅನಾಧಿ ಕಾಲದಿಂದಲು ರೂಢಿಯಲ್ಲಿದೆ. ಐತಿಹ್ಯ, ಪುರಾಣ ಕಾಲದಿಂದಲೂ ಈ ತರಹದ ಆಚರಣೆ ದೈವೀ ಸ್ವರೂಪಕರಿಸುವುದನ್ನು ಕಂಡು ಬರುತ್ತದೆ. ಇಂತಹ ನಂಬಿಕೆಗಳಿಂದಲೇ ಮಾತೃಪ್ರಧಾನತೆಯಿಂದಾಗಿ 'ತಾಯಿಯೇ ಸತ್ಯ' 'ತಾಯಿಯೇ ಮೊದಲ ಗುರು' ಎಂಬಂತೆ ತಾಯಿಗೆ ಒಂದು ವಿಶಿಷ್ಟ ಸ್ಥಾನ ನೀಡಿ ದೇವರು ಎಂಬ ಕಲ್ಪನೆಯಿಂದ ಪೂಜಿಸುವುದು ವಾಡಿಕೆಯಾಗಿದೆ. ತಾಯಿಯಾದವಳು ಮಕ್ಕಳ ಪಾಲನೆ, ಗಂಡನಿಗೆ ಮಾರ್ಗದರ್ಶಕಳಾಗಿ, ಮನೆಯ ನಿರ್ವಹಣೆ ಮಾಡುತ್ತಾ ಇಡೀ ಕುಟುಂಬದ ಜವಾಬ್ದಾರಿ ನಿಭಾಯಿಸುತ್ತಾಳೆ.

ಹೆಣ್ಣು ಪತಿಯೆ ಪರದೈವ ಎಂಬಂತೆ ಪತಿಯಲ್ಲಿ ವಿಲೀನಳಾಗಿ ಪತಿಭಕ್ತಿ ಮೆರೆಯುತ್ತಾಳೆ. ಪಾತಿವ್ರತ್ಯದ ಕಲ್ಪನೆಯಲ್ಲಿ ತನ್ನೆಲ್ಲಾ ಸುಖಭೋಗಗಳ ತ್ಯಾಗ ಮಾಡಿ ಗಂಡನ ಹಿತಕ್ಕಾಗಿ ಮೆರೆದ ಎಷ್ಟೋ ಸ್ತ್ರೀಯರನ್ನು ನೋಡಬಹುದಾಗಿದೆ. ಇಂತಹ ಜವಾಬ್ದಾರಿ ಮೆರೆದವರಲ್ಲಿ ಸವದತ್ತಿ ಎಲ್ಲಮ್ಮ ಸಹ ಒಬ್ಬಳಾಗಿದ್ದಾಳೆ. ಎಲ್ಲಮ್ಮ ಮಾತೃದೇವತಾ ಹಿನ್ನಲೆಯಲ್ಲಿ ಎಲ್ಲರ ಅಮ್ಮ ಎಲ್ಲಮ್ಮಳಾಗಿ ಪ್ರಾದೇಶಿಕವಾದ ಸ್ವರೂಪ ಪಡೆದಿದ್ದಾಳೆ.

ಎಲ್ಲಮ್ಮಳಿಗೆ ಅನೇಕ ಹೆಸರುಗಳಿಂದ ಕರೆಯುತ್ತಿದ್ದು ರೇಣುಕೆ, ಉಚ್ಚಂಗೆಮ್ಮ, ಎಲ್ಲಮ್ಮ, ಹುಲಿಗೆಮ್ಮ ಸವಾರೆಮ್ಮ, ಮಾಮು ತಾಯಿ, ಪದ್ಮಾವತಿ, ಸತ್ಯಕ್ಕ ಮೊದಲಾದ ಹೆಸರುಗಳಿಂದ ಧಾರ್ಮಿಕ ಹಾಗೂ ವರ್ಗ ವ್ಯವಸ್ಥೆಯ ಹಿನ್ನೆಲೆಯ ಆರಾಧನೆಯಲ್ಲಿ ಅನೇಕ ರೀತಿಯಾಗಿ ಹೆಸರುಗಳ ಇಟ್ಟುಕೊಂಡಿರುವುದನ್ನು ಗಮನಿಸಬಹುದಾಗಿದೆ. ಎಲ್ಲಮ್ಮ ಪ್ರಾದೇಶಿಕವಾದ ಎಲ್ಲೆಗಳೊಳಗೆ, ಸೀಮೆಯ ಕಾಯಿವ ದೈವವಾಗಿರುವುದನ್ನು ಗಮನಿಸಲಾಗಿದ್ದು, ಗ್ರಾಮ ದೇವತೆ, ಕುಲದೇವತೆ, ಮನೆದೇವತೆಯಾಗಿಯೂ ಆಚರಿಸುವುದನ್ನು ಗಮನಿಸಲಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಕಾಲಮಾನಕ್ಕೆ ತಕ್ಕಂತೆ ಎಲ್ಲಮ್ಮನ ಆರಾಧನೆಯು ಬದಲಾಗುತ್ತ ಸಾಗಿರುವುದನ್ನು ಗಮನಿಸಲಾಗಿದೆ.

ಎಲ್ಲಮ್ಮ ಜಮದಗ್ನಿಯನ್ನು ವಿವಾಹವಾಗಿ ಪತಿಭಕ್ತಿ ಮೆರೆದಿದ್ದಾಳೆ. ಅವಳು ಈ ಪತಿಭಕ್ತಿಗೆ ಮೆಚ್ಚಿದ ಭಕ್ತ ಸಮೂಹ ಅವಳಿಗೆ ಆರಾಧಕರಾಗಿರುವುದನ್ನು ಗಮನಿಸಲಾಗಿದೆ. ಈ ಭಕ್ತರು ಬೆಳಗಿನಿಂದ ಸಂಜೆಯ ತನಕ ದುಡಿಯುವಾಗ ಮಾನಸಿಕವಾಗಿ ದೇವಿಯ ಕುರಿತಾದ ಭಕ್ತಿಪೂರ್ವಕವಾದ ಕಾರ್ಯ ಮಾಡುವುದನ್ನು

ಗಮನಿಸಲಾಗಿದೆ. ರೇಣುಕಾ ಎಲ್ಲಮ್ಮ ಸಾಮಾನ್ಯ ವ್ಯಕ್ತಿಯಾಗಿದ್ದು ತನ್ನ ಕಾರ್ಯಗಳ ಸಾಧನದಿಂದಾಗಿ ದೇವ ದಾನವರ ಸಮ್ಮಿಲನದಿಂದಾಗಿ ಜನಪದ ಸಂಸ್ಕೃತಿಯಲ್ಲಿ ದೇವತೆಯಾಗಿರುವುದನ್ನು ತಿಳಿಯಲಾಗಿದೆ.

* ಎಲ್ಲಮ್ಮನ ಕುರಿತಾದ ಚರಿತ್ರೆ, ಐತಿಹ್ಯವು ಪುರಾಣ ಕಾಲದಿಂದಲೂ ಕಂಡು ಬಂದಿದ್ದು ಅದು ರೇಣುಕ ರಾಜನ ಮಗಳಾಗಿ, ಜಮದಗ್ನಿಯ ಹೆಂಡತಿಯಾಗಿ, ಪರಶುರಾಮನ ತಾಯಿಯಾಗಿ ತನ್ನ ಜವಾಬ್ದಾರಿ ನಿರ್ವಹಿಸಿದ್ದು, ಪ್ರಸ್ತುತ ಸಂದರ್ಭದಲ್ಲೂ ಸ್ತ್ರೀಯರ ಕಾರ್ಯವೈಖರಿಯನ್ನೇ ಹೋಲುತ್ತದೆ ಎಂಬುದನ್ನು ಚರ್ಚೆಗೆ ಒಳಪಡಿಸಲಾಗಿದೆ.

* ರೇಣುಕಾ ದೇವಿಯ ಪ್ರಾದೇಶಿಕ ಮಹತ್ವ ಪಡೆದಿದ್ದು, ಎಲ್ಲೆಯ ಕಾಯುವ ದೇವಿ ಎಲ್ಲರ ಅಮ್ಮಳಾಗಿ ಎಲ್ಲಮ್ಮ ಮಾತೃಪ್ರಧಾನತೆಯ ವ್ಯವಸ್ಥೆಯಲ್ಲಿ ಬೆಳೆದಿರುವುದನ್ನು ಗಮನಿಸಲಾಗಿದೆ.

* ಎಲ್ಲಮ್ಮಳ ಭಕ್ತರು ಭಕ್ತಿಯಿಂದ ಭಂಡಾರ ಹಚ್ಚುವುದು, ಜಡೆ ಬಿಡುವುದು, ಬೆತ್ತಲೆ ಸೇವೆ, ಬೇವಿನುಡಿಗೆ ಉಡುವುದು, ಇದು ಜಾತ್ರೆಯ ಸಂದರ್ಭ ಹಾಗೂ ನಿತ್ಯ ಪೂಜೆಯ ಸಂದರ್ಭದಲ್ಲಿನ ಅಂಶಗಳಾಗಿರುವುದನ್ನು ಗಮನಿಸಲಾಗಿದೆ. ಇವುಗಳ ಕುರಿತಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟಾಗಬಹುದಾದ ಪರಿಣಾಮಗಳನ್ನು ಕುರಿತು ಚರ್ಚಿಸಲಾಗಿದೆ.

* ಜೋಗತಿಯರು ಎಲ್ಲಮ್ಮ ದೇವಿಯ ಹೆಸರಿನಲ್ಲಿ ಭಿಕ್ಷಾಟನೆ ಮಾಡಿ ಉಪಜೀವನ ಸಾಗಿಸುತ್ತಿದ್ದು, ಧಾರ್ಮಿಕವಾಗಿ, ಸಾಮಾಜಿಕವಾಗಿ ಅವರ ಕಾರ್ಯ ವೈಖರಿಗಳನ್ನು ಕುರಿತು ಚರ್ಚಿಸಲಾಗಿದೆ.

* ಶಿಷ್ಟ ಮತ್ತು ಜಾನಪದೀಯ (ಪರಿಶಿಷ್ಟ) ಸಾಹಿತ್ಯ ಹಾಗೂ ನಂಬಿಕೆಗಳಲ್ಲಿ ರೇಣುಕೆಯ ಕುರಿತಾದ ಚಿಂತನೆಗಳು, ನಂಬಿಕೆಗಳು, ಆಚರಣೆಗಳ ಕುರಿತು ಚಚಿಸಲಾಗಿದೆ.

* ಎಲ್ಲಮ್ಮ ದೇವಿಯ ಕುರಿತಾಗಿ ಕಾವ್ಯ ಕಥನ ಕವನಗಳ ಹಾಡುವ ಗಾಯಕರು, ವೃತ್ತಿಗಾಯಕ ಕಾವ್ಯ ಸೃಷ್ಟಿ ಹಾಡುವ ಕಲೆ, ಗಾಯನ ಮಾಡುವಿಕೆ ಶಕ್ತಿಯನ್ನು ಅವರ ಚಿಂತನೆಗಳ ಕುರಿತಾಗಿ ವಿಚಾರಗಳ ವಿವರಗಳ ಕುರಿತಾಗಿ ಗಮನಿಸಲಾಗಿದೆ.

* ಎಲ್ಲಮ್ಮ ದೇವಿಯ ಕಾವ್ಯ ಹಾಡುವವರ ಉಡುಗೆ-ತೊಡುಗೆ ವಾದ್ಯಗಳು ಅವರ ಕುಣಿತ, ಅವರ ನಂಬಿಕೆಗಳು, ಆಚಾರ-ವಿಚಾರಗಳನ್ನು ಕುರಿತಾಗಿ ಚರ್ಚಿಸಲಾಗಿದೆ.

* ಎಲ್ಲಮ್ಮ ಗ್ರಾಮದೇವತೆಯಾಗಿ ಗ್ರಾಮಗಳ ಸಲಹುವ ದೇವಿ ಊರಿನ ಅಮ್ಮ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿಯ ಪರಿಣಾಮಗಳ ಕುರಿತು ಚರ್ಚಿಸಲಾಗಿದೆ.

* ಧಾರ್ಮಿಕ ವೃತ್ತಿಗಾಯಕರು ಎಲ್ಲಮ್ಮನ ಭಕ್ತರಾಗಿ ತಮ್ಮ ಜೀವನದಲ್ಲಿ ಚೌಡಿಕೆ ಹಿಡಿದು ಕಾವ್ಯ ಹಾಡುತ್ತಾ ಲೋಕ ಸಂಚಾರ ಮಾಡುತ್ತಿರುವುದನ್ನು, ಅವರ ಜೀವನ ಸಂಪ್ರದಾಯಗಳ ಕುರಿತು ತಿಳಿಯಲಾಗಿದೆ.

* ದೇವಿಯ ಹೆಸರಿನಲ್ಲಿ ಬೆತ್ತಲೆ ಸೇವೆ, ಅದರ ಪರಿಣಾಮಗಳ ಕುರಿತು ಚರ್ಚಿಸಲಾಗಿದೆ.

* ಎಲ್ಲಮ್ಮನ ಕಾವ್ಯ, ಕಾವ್ಯದ ಶೈಲಿ, ಕಾವ್ಯ ನಿರ್ಮಾಣ ಪ್ರತಿಭೆಯ ಕುರಿತು, ಅವರ ವ್ಯಕ್ತಿತ್ವ ಕಾರ್ಯವೈಖರಿಗಳ ಕುರಿತಾಗಿ ಚರ್ಚಿಸಲಾಗಿದೆ.

* ತಳ ಸಮುದಾಯದವರು ದೈವಿ ಕಲ್ಪನೆ ಹಾಗೂ ದೇವಿಯ ಬಗೆಗಿನ ನಂಬಿಕೆಗಳನ್ನು ತಿಳಿಯಲಾಗಿದೆ.

* ಶ್ರಮ ಸಂಸ್ಕೃತಿಯ ಜನರು ಹಾಗು ಕೃಷಿ ಸಮುದಾಯದವರು ದೇವಿಯ ಮೊರೆ ಹೋಗಿ ಆರಾಧಿಸುವುದರ ಕುರಿತಾಗಿ ಚರ್ಚಿಸಲಾಗಿದೆ.

* ರೇಣುಕಾ ಎಲ್ಲಮ್ಮಳು ಭಕ್ತರ ದೃಷ್ಟಿಯಲ್ಲಿ ದೈವವಾಗಿ ಹಾಗೂ ವ್ಯಕ್ತಿಯಾಗಿರುವುದನ್ನು ಚರ್ಚಿಸಲಾಗಿದೆ.

* ಎಲ್ಲಮ್ಮನ ಆರಾಧಕರು ಸಮುದಾಯಗಳ ಸಂಪರ್ಕವಿಲ್ಲದೆ ಸಾಗಲಾರದು. ಸಮೂಹಗಳ ಮೂಲಕ ಮೌಖಿಕವಾಗಿ ಕಾವ್ಯ ಹರಿಯುತ್ತಿರುವುದನ್ನು ಚರ್ಚಿಸಲಾಗಿದೆ.

* ಎಲ್ಲಮ್ಮನ ಕಾವ್ಯವು ಪುರಾಣದಿಂದ ಪ್ರಸ್ತುತ ಸಂದರ್ಭದವರೆಗೂ ಚಲಿಸಿರುವುದನ್ನು ಗಮನಿಸಲಾಗಿದೆ.

* ಎಲ್ಲಮ್ಮನ ಕಾವ್ಯದ ಮೂಲಕ ಸ್ತ್ರೀಯರ ವ್ಯಕ್ತಿತ್ವದ ನೆಲೆಯನ್ನು ಗುರುತಿಸುವಿಕೆ, ಸ್ತ್ರೀ ಯಜಮಾನಿಕೆಯನ್ನು ಗುರುತಿಸಿಕೊಳ್ಳುವಿಕೆಯನ್ನು ಕಂಡುಕೊಳ್ಳಲಾಗಿದೆ.

* ಎಲ್ಲಮ್ಮನ ಆರಾಧಕರಾಗಿ ಜೋಗತಿ, ಜೋಗಪ್ಪ ಜೀವನ ಶೈಲಿ ತಿಳಿಯಲಾಗಿದೆ.

## ಪರಾಮರ್ಶನ ಗ್ರಂಥಗಳು


೧. ಅಂಬಳಿಕೆ ಹಿರಿಯಣ್ಣ, ೧೯೮೫, ***ಲೌಕಿಕ ಸಂಪ್ರದಾಯದ ಚೌಡಿಕೆ ಕಾವ್ಯಗಳು***, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨. ಅಂಬಳಿಕೆ ಹಿರಿಯಣ್ಣ, ೧೯೮೮, ***ಜಾನಪದ ಪರಿಶೋಧ,*** ಪ್ರಜ್ವಲ ಪ್ರಕಾಶನ, ಮೈಸೂರು.

೩. ಅಂಬಳಿಕೆ ಹಿರಿಯಣ್ಣ, ೧೯೯೪, ***ಜಾನಪದ ಲೋಚನ,*** ಪ್ರಜ್ವಲ ಪ್ರಕಾಶನ, ಮೈಸೂರು.

೪. ಅಂಬಳಿಕೆ ಹಿರಿಯಣ್ಣ, ೧೯೯೪, ***ಜಾನಪದ : ಕೆಲವು ಅಧ್ಯಯನಗಳು***, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫. ಅಂಬಳಿಕೆ ಹಿರಿಯಣ್ಣ, ೨೦೦೮, ***ಜಾನಪದ ಸಿದ್ಧಾಂತಗಳು ಮತ್ತು ವಿಧಾನಗಳು***, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

೬. ಇಂದಿರಾ ಆರ್., ೨೦೦೨, ***ಮಹಿಳೆ ಸಮಾಜ ಮತ್ತು ಸಂಸ್ಕೃತಿ***, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೭. ಕಲಬುರ್ಗಿ ಎಂ. ಎಂ., ೧೯೮೭, ***ಜಾನಪದ ಸಾಹಿತ್ಯ ದರ್ಶನ ಭಾಗ ೧೧***, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮. ಕಲಬುರ್ಗಿ ಎಂ. ಎಂ., ೧೯೮೮, ***ಮಾರ್ಗ – ೨***, ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು.

೯. ಕುಲಕರ್ಣಿ ಯ. ಗು, ೧೯೮೭, ***ರೇಣುಕಾ ಮಹಾತ್ಮೆ***, ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ.

೧೦. ಕೃಷ್ಣವೇಣಿ ಆರ್, ೨೦೦೮, ***ಹುಲಿಗೆಮ್ಮ***, ಅಂಬಾರಿ ಪ್ರಕಾಶನ, ಮೈಸೂರು.

೧೧. ಕೃಷ್ಣಮೂರ್ತಿ ಹನೂರು, ೧೯೮೧, ***ಕತ್ತಲ ದಾರಿ ದೂರ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಕೃಷ್ಣಮೂರ್ತಿ ಹನೂರು, ೨೦೦೫, ***ಸಾವಿರದ ಸಿರಿಬೆಳಗು***, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಬೆಂಗಳೂರು.

೧೩. ಗದ್ದಿಗಿನ ಮಠ ಬಿ.ಎಸ್., ೧೯೮೬, ***ಕನ್ನಡ ಜಾನಪದ ಗೀತೆಗಳು***, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೪. ಗುರುಪ್ರಸಾದ್ ಸಿ. ಡಿ, ೨೦೦೫, ***ಏಳು ಊರಿನ ದೇವತೆಗಳು ಒಂದು ಅಧ್ಯಯನ***, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಚಿದಾನಂದಮೂರ್ತಿ ಎಂ, ೨೦೦೨, *ಜನ–ಜನಪದ–ಜಾನಪದ,* ಸಪ್ನ ಬುಕ್ ಹೌಸ್, ಬೆಂಗಳೂರು.

೧೭. ಚೆನ್ನಕ್ಕ ಎಲಿಗಾರ, ೧೯೯೦, *ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,* ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೮. ಚೆನ್ನಣ್ಣ ವಾಲೀಕಾರ, ೨೦೦೨, *ಸಮಗ್ರ ನಾಟಕ ಸಂಪುಟ,* ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಕಲಬುರಗಿ.

೧೯. ದುಂಡ್ಯಪ್ಪ ಹಿ.ಗೂ, ೧೯೯೪, *೬೬ ಹಳ್ಳಿಯ ಒಡತಿ ಊರಮ್ಮನ ಚರಿತ್ರೆ,* ಕುಬೇರೇಶ್ವರ ಪ್ರಕಾಶನ, ಹರಿಹರ.

೨೦. ನಾಯಕ ಎಮ್. ಆರ್, ೨೦೧೪, *ನಾವಡರ ಜಾನಪದ ತವನಿಧಿ,* ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ.

೨೧. ನಾಗೇಗೌಡ ಎಚ್.ಎಲ್., ೨೦೦೭, *ಕನ್ನಡ ಜನಪದ ಕಥನ ಕಾವ್ಯಗಳು,* ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೨೨. ನಾವಡ ಎ.ವಿ., ೧೯೯೫, *ಜಾನಪದ ಸಮಾಲೋಚನ,* ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೩. ನಿಂಗಪ್ಪ ಮುದೇನೂರು, ೨೦೦೪, *ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು,* ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಕೇಶನ್ಸ್, ಬೆಂಗಳೂರು.

೨೪. ಪರಮಶಿವಯ್ಯ ಜೀ. ಶಂ., ೧೯೭೮, *ಜಾನಪದ,* ಸಾಹಿತ್ಯ ಪದ, ಮೈಸೂರು.

೨೫. ಪರಮಶಿವಯ್ಯ ಜಿ.ಶಂ., ೨೦೧೨, *ಜಾನಪದ : ಕೆಲವು ಮುಖಗಳು,* ಸಾಗರ್ ಪ್ರಕಾಶನ, ಬೆಂಗಳೂರು.

೨೬. ಪರಮಶಿವಯ್ಯ ಜಿ. ಶಂ., ೨೦೧೫, *ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು,* ಪೂರ್ಣಿಮಾ ಪ್ರಿಂಟರ್ಸ್, ಬೆಂಗಳೂರು.

೨೭. ಪ್ರೀತಿ ಶುಭಚಂದ್ರ, ೨೦೦೨, *ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು,* ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಪುರುಷೋತ್ತಮ ಬಿಳಿಮಲೆ, ೧೯೯೯, *ಹುಲಿಗೆಮ್ಮ,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಬಸವರಾಜ್ ಕುರುವ, ೨೦೧೧, ***ಜನಪದ ಮಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು,*** ಗೀತಾಂಜಲಿ ಪಬ್ಲಿಕೇಶನ್ಸ್, ಬೆಂಗಳೂರು.

೩೦. ಬೋರಲಿಂಗಯ್ಯ ಹಿ. ಚಿ, ೧೯೭೯, ***ಉಜ್ಜನಿ ಚೌಡಮ್ಮ,*** ಶ್ರೀ ಗೋಪಾಲಕೃಷ್ಣ ಪ್ರಿಂಟಿಂಗ್ ಪ್ರೆಸ್ ಚಾಮರಾಜಪೇಟೆ, ಬೆಂಗಳೂರು.

೩೧. ಬೋರಲಿಂಗಯ್ಯ ಹಿ. ಚಿ, ೨೦೦೦, ***ಬುಡಕಟ್ಟು ದೈವಾರಾಧನೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಮಂಜುನಾಥ ಬೇವಿನಕಟ್ಟಿ, ೧೯೯೪, ***ಮಲಿಯಮ್ಮ ನಿನ್ನಾಲ್ಕುದೋ.. ಉದೋ..,*** ಅಂಬಿಕಾ ಪ್ರಿಂಟರ್ಸ್ ಆಂಡ್ ಪಬ್ಲಿಕೇಶನರ್ಸ್, ಹೊಸಪೇಟೆ.

೩೩. ಮಂಜುನಾಥ ಬೇವಿನಕಟ್ಟಿ, ೨೦೦೯, ***ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಮುಗಳಿ ರಂ. ಶ್ರೀ., ೨೦೦೫, ***ಕನ್ನಡ ಸಾಹಿತ್ಯತ ಚರಿತ್ರೆ,*** ಗೀತಾ ಬುಕ್ ಹೌಸ್, ಮೈಸೂರು.

೩೫. ಮೇತ್ರಿ ಕೆಂ.ಎಂ, ೨೦೦೫, ***ಎಲ್ಲಮ್ಮನ ಕಥನ ಕಾವ್ಯ,*** ವಿದ್ಯಾನಿಧಿ ಪ್ರಕಾಶನ, ಗದಗ.

೩೬. ಮೈಲಹಳ್ಳಿ ರೇವಣ್ಣ, ***ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೩೭. ರಾಜಪ್ಪ ದಳವಾಯಿ, ೧೯೯೪, ***ಏಳೂರು ದೇವರ ಕಾಳಗ,*** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೩೮. ಲಕ್ಕಪ್ಪಗೌಡ ಎಚ್.ಜೆ., ೧೯೯೭, ***ಜಾನಪದ ಕೈಪಿಡಿ,*** ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೯. ಲಕ್ಕಪ್ಪಗೌಡ ಎಚ್.ಜೆ., ೧೯೯೮, ***ಸುವರ್ಣ ಜನಪದ,*** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೦. ಲಿಂಗಯ್ಯ ಡಿ, ಮತ್ತು ಸಂಧ್ಯಾರೆಡ್ಡಿ ಕೆ.ಆರ್., ೨೦೦೬, ***ಜಾನಪದ : ಸ್ವರೂಪ ಮತ್ತು ಸಾಹಿತ್ಯ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೧. ವೀರಣ್ಣ ದಂಡೆ, ೧೯೯೫ ***ಜಾನಪದ,*** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೨. ವೀರಣ್ಣ ದಂಡೆ, ೧೯೯೬, ***ಜನಪದ ಸಾಹಿತ್ಯ ಸಿದ್ಧಾಂತಗಳು,*** ಬಸವ ಪ್ರಕಾಶನ, ಕಲಬುರಗಿ.

೪೩. ವೀರಣ್ಣ ದಂಡೆ, ೧೯೯೯. ***ಜಾನಪದ ಶಾಸ್ತ್ರ ಸಿದ್ಧಾಂತಗಳು,*** ನೆಲಮನೆ ಪ್ರಕಾಶನ. ಶ್ರೀರಂಗಪಟ್ಟಣ

೪೪. ವೀರಣ್ಣ ದಂಡೆ, ೨೦೦೪, *ಜನಪದ ಕಾವ್ಯ ಮೀಮಾಂಸೆ ಹಾಗೂ ವಿಮರ್ಶಾ ಪ್ರಸ್ಥಾನಗಳು,* ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೫. ವೀರಣ್ಣ ದಂಡೆ, ೨೦೦೬, *ಕನ್ನಡ ಜನಪದ ಕಾವ್ಯ ಮೀಮಾಂಸೆ,* ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೪೬. ವೀರೇಶ ಬಡಿಗೇರ, ೧೯೯೯, *ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ,* ವಿಮೋಚನಾ ಪ್ರಕಾಶನ-ವಿಮೋಚನಾ ದೇಸವದಾಸಿ ಪುನರ್ವಸತಿ ಸಂಘ, ಅಥಣಿ ಬೆಳಗಾವಿ.

೪೭. ವೆಂಕಟೇಶ ಇಂದ್ವಾಡಿ, ೨೦೧೦, *ಸಿರಿ ಜನಪದ ಕಾವ್ಯ,* ಪ್ರಗತಿ ಪ್ರಿಂಟರ್ಸ್ ಕಮ್ಯುನಿಕೇಶನ್, ಬೆಂಗಳೂರು.

೪೮. ಶ್ರೀಕಂಠ ಕೂಡಿಗೆ, *ಜಾನಪದ ವಿವಿಧ ಮುಖಗಳು,* ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೯. ಶ್ರೀಮತಿ ಎಚ್. ಎಸ್, ಶಿವಾನಂದ ಎಸ್ ವಿರಕ್ತಮಠ ಮತ್ತು ಕೃಷ್ಣ ಜೆ, ೨೦೦೭, *ಹೆಣ್ಣು ಮತ್ತು ಭಾಷೆ,* ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೦. ಶೇಷಗಿರಿರಾವ್ ಎಲ್. ಎಸ್., ೨೦೧೩, *ಹೊಸಗನ್ನಡ ಸಾಹಿತ್ಯ ಚರಿತ್ರೆ,* ಅಂಕಿತ ಪುಸ್ತಕ, ಬೆಂಗಳೂರು.

೫೧. ಸದಾನಂದ ಕನವಳ್ಳಿ ಮತ್ತು ವೀರಣ್ಣ ರಾಜೂರು, ೧೯೯೮, *ಮಹಾಮಾರ್ಗ; ಎಂ. ಎಂ. ಕಲಬುರ್ಗಿ ಅಭಿನಂದನಾ ಗ್ರಂಥ ಸಂಪುಟ ೧, ೨,* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೨. ಸಿದ್ಧಲಿಂಗಯ್ಯ, ೨೦೦೫, *ಗ್ರಾಮದೇವತೆಗಳು,* ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೫೩. ಸಿದ್ಧರಾಮಯ್ಯ ಎಸ್. ಜಿ, ಮತ್ತು ಸಂಧ್ಯಾರೆಡ್ಡಿ ಕೆ.ಆರ್., ೨೦೦೬, *ಸುವರ್ಣ ಜನಪದ ಕಾವ್ಯ,* ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೪. ಸುಂಕಾಪುರ ಎಂ. ಎಸ್, ೧೯೭೭. *ಜೋಗತಿಯ ಹಾಡು,* ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ.

